| | | | | |
|---|---|---|---|---|
| 23 | ಸಿದ್ದಗಂಗಪ್ಪ. ಟಿ. | ಸಿದ್ದಗಂಗಪ್ಪ. ಟಿ. ಬಿನ್ ತಿಮ್ಮಯ್ಯ, ವಕೀಲರು, ಕುಂದೂರು ದೇವರಾಯಪಟ್ಟಣ ಅಂಚೆ, ಕಸಬ ಹೋಬಳಿ, ತುಮಕೂರು ತಾಲ್ಲೂಕು. | ಪಕ್ಷೇತರ | ಗ್ಯಾಸ್ ಸಿಲೆಂಡರ್ |
| 24 | ಸಂಜೀವಪ್ಪ | ಸಂಜೀವಪ್ಪ ಬಿನ್ ಚಿಕ್ಕಹನುಮಯ್ಯ, 6 ನೇ ವಾರ್ಡ್, ಚಿಕ್ಕಣ್ಣ ಪಾಳ್ಯ, ಸಿದ್ದಾಪುರ ಅಂಚೆ, ಮಧುಗಿರಿ ತಾಲ್ಲೂಕು. | ಪಕ್ಷೇತರ | ಕತ್ತಿನ ಪಟ್ಟಿ |
| 25 | ಟಿ.ಹೆಚ್.ಸಂಜೀವರಾಯಪ್ಪ | ಟಿ.ಹೆಚ್.ಸಂಜೀವರಾಯಪ್ಪ ಬಿನ್ ಚಿಕ್ಕಹನುಮಂತರಾಯಪ್ಪ, ತೊಂಡೋಟಿ, ಜನಕಲೋಟಿ ಅಂಚೆ, ಐ ಡಿ ಹಳ್ಳಿ ಹೋಬಳಿ, ಮಧುಗಿರಿ ತಾಲ್ಲೂಕು, | ಪಕ್ಷೇತರ | ಹೊಲಿಗೆ ಯಂತ್ರ |

ಸ್ಥಳ : ಮಧುಗಿರಿ
ದಿನಾಂಕ: 13–12–2008

**ಗೋಪಾಲ**
ಚುನಾವಣಾಧಿಕಾರಿ
138 – ಮಧುಗಿರಿ ವಿಧಾನಸಭಾ ಕ್ಷೇತ್ರ

**ನಮೂನೆ 7 ಎ**
**[10(1)ನೇ ನಿಯಮವನ್ನು ನೋಡಿ]**
**ಚುನಾವಣೆಗೆ ಸ್ಪರ್ಧಿಸಿರುವ ಉಮೇದುವಾರರ ಪಟ್ಟಿ**
**180 – ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದಿಂದ ಕರ್ನಾಟಕ ವಿಧಾನಸಭೆಗೆ ಉಪ–ಚುನಾವಣೆ – 2008**

| ಕ್ರಮ ಸಂಖ್ಯೆ. | ಉಮೇದುವಾರನ ಹೆಸರು | ಉಮೇದುವಾರನ ವಿಳಾಸ | ಉಮೇದುವಾರನ ಪಕ್ಷ | ಉಮೇದುವಾರನಿಗೆ ಕೊಟ್ಟಿರುವ ಚಿಹ್ನೆ |
|---|---|---|---|---|
| 1 | 2 | 3 | 4 | 5 |
| **(i) ಮಾನ್ಯತೆ ಪಡೆದ ರಾಷ್ಟ್ರೀಯ ಮತ್ತು ರಾಜ್ಯ ರಾಜಕೀಯ ಪಕ್ಷಗಳ ಉಮೇದುವಾರರು** | | | | |
| 1. | ಜೆ.ನರಸಿಂಹಸ್ವಾಮಿ | ಬಿನ್. ಆರ್.ಎಲ್. ಜಾಲಪ್ಪ, ನಂ.3685, ಸೋಮೇಶ್ವರಬಡಾವಣೆ, ದೊಡ್ಡಬಳ್ಳಾಪುರ ನಗರ | ಭಾರತೀಯ ಜನತಾ ಪಕ್ಷ | ಕಮಲ |
| 2. | ಬಿ.ಮುನೇಗೌಡ | ಬಿನ್. ಲೇ: ಬೈರೇಗೌಡ, ಪಾಳ್ಯ ಗ್ರಾಮ, ಕಸಬಾ ಹೋಬಳಿ, ದೇವನಹಳ್ಳಿ ತಾಲ್ಲೂಕು | ಜನತಾದಳ (ಜಾತ್ಯಾತೀತ) | ತಲೆಯ ಮೇಲೆ ಭತ್ತದ ಹೊರೆಹೊತ್ತ ರೈತ ಮಹಿಳೆ |
| 3. | ಆರ್.ಜಿ.ವೆಂಕಟಾಚಲಯ್ಯ | ಬಿನ್. ಗಿರಿರಾವ್, ಹಣಬೆ ಗ್ರಾಮ, ದೊಡ್ಡಬೆಳವಂಗಲ ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ | ಕೈ |
| (ii) **ನೋಂದಾಯಿತ ರಾಜಕೀಯ ಪಕ್ಷಗಳ ಉಮೇದುವಾರರು (ಮಾನ್ಯತೆ ಪಡೆದ ರಾಷ್ಟ್ರೀಯ ಮತ್ತು ರಾಜ್ಯ ರಾಜಕೀಯ ಪಕ್ಷಗಳನ್ನು ಹೊರತುಪಡಿಸಿ)** | | | | |
| 4. | ಎಂ. ವೆಂಕಟೇಶ್ | ಬಿನ್. ಮುನಿವಸಂತಪ್ಪ, ನಂ.67/ಎ, 5'ಸಿ' ಮುಖ್ಯ ರಸ್ತೆ, ನಾರಾಯಣಪ್ಪ ಬ್ಲಾಕ್, ಆರ್.ಟಿ.ನಗರ, ಬೆಂಗಳೂರು–32 | ಭಾರತೀಯ ಪ್ರಜಾಪಕ್ಷ | ಬ್ಯಾಟ್ಸ್‌ಮನ್ |

| (iii)ಇತರೆ ಉಮೇದುವಾರರು | | | | |
|---|---|---|---|---|
| 5. | ಎಲ್.ನಾಗರಾಜ್ | ಬಿನ್. ಲೇ. ಲಕ್ಷ್ಮಣರಾವ್, ನಂ.264, 16ನೇ ಕ್ರಾಸ್, ಶಿವಪುರ, ಪೀಣ್ಯ ಅಂಚೆ, ಬೆಂಗಳೂರು–58 | ಪಕ್ಷೇತರ | ತೆಂಗಿನಕಾಯಿ |
| 6. | ರಾಮಾಂಜಿನಿರೆಡ್ಡಿ | ಬಿನ್. ಆಂಜನರೆಡ್ಡಿ, ನಂ.367, ವಾರ್ಡ್ ನಂ.1, ಸೋಮೇಶ್ವರಬಡಾವಣೆ, ಗಂಗಾಧರಪುರ, ದೊಡ್ಡಬಳ್ಳಾಪುರ ನಗರ | ಪಕ್ಷೇತರ | ಜೋಳ |

ಪಿ.ಆರ್.ಶಿವಪ್ರಸಾದ್
ಚುನಾವಣಾಧಿಕಾರಿ,
180–ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರ

ಸ್ಥಳ: ದೊಡ್ಡಬಳ್ಳಾಪುರ
ದಿನಾಂಕ: 13.12.2008

**ನಮೂನೆ 7 ಎ**
**[10(1)ನೇ ನಿಯಮವನ್ನು ನೋಡಿ]**
**ಚುನಾವಣೆಗೆ ಸ್ಪರ್ಧಿಸಿರುವ ಉಮೇದುವಾರರ ಪಟ್ಟಿ**
**187 – ಮದ್ದೂರು ವಿಧಾನಸಭಾ ಕ್ಷೇತ್ರದಿಂದ ಕರ್ನಾಟಕ ವಿಧಾನಸಭೆಗೆ ಉಪ–ಚುನಾವಣೆ – 2008**

| ಕ್ರಮ ಸಂಖ್ಯೆ. | ಉಮೇದುವಾರನ ಹೆಸರು | ಉಮೇದುವಾರನ ವಿಳಾಸ | ಉಮೇದುವಾರನ ಪಕ್ಷ | ಉಮೇದುವಾರನಿಗೆ ಕೊಟ್ಟಿರುವ ಚಿಹ್ನೆ |
|---|---|---|---|---|
| **1** | **2** | **3** | **4** | **5** |
| (i) ಮಾನ್ಯತೆ ಪಡೆದ ರಾಷ್ಟ್ರೀಯ ಮತ್ತು ರಾಜ್ಯ ರಾಜಕೀಯ ಪಕ್ಷಗಳ ಉಮೇದುವಾರರು | | | | |
| 1. | ಕಲ್ಪನ ಎಂ.ಎಸ್. ಸಿದ್ದರಾಜು | ದೊಡ್ಡಿಬೀದಿ, ಮದ್ದೂರು | ಜನತಾದಳ (ಜಾತ್ಯಾತೀತ) | ತಲೆಯ ಮೇಲೆ ಭತ್ತದ ಹೊರೆಹೊತ್ತ ರೈತ ಮಹಿಳೆ |
| 2. | ಎಸ್.ಗುರುಚರಣ್ | ಸೋಮನಹಳ್ಳಿ, ಕಸಬಾ ಹೋಬಳಿ, ಮದ್ದೂರು ತಾಲ್ಲೂಕು. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ | ಕೈ |
| 3. | ಡಿ.ಸಿ.ತಮ್ಮಣ್ಣ | ನಂ. 2421, 1ನೇ ಮುಖ್ಯರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು – 40. | ಭಾರತೀಯ ಜನತಾ ಪಕ್ಷ | ಕಮಲ |
| (ii) ನೋಂದಾಯಿತ ರಾಜಕೀಯ ಪಕ್ಷಗಳ ಉಮೇದುವಾರರು (ಮಾನ್ಯತೆ ಪಡೆದ ರಾಷ್ಟ್ರೀಯ ಮತ್ತು ರಾಜ್ಯ ರಾಜಕೀಯ ಪಕ್ಷಗಳನ್ನು ಹೊರತುಪಡಿಸಿ) | | | | |
| ------ ಇಲ್ಲ ------ | | | | |
| (iii) ಇತರೆ ಉಮೇದುವಾರರು | | | | |
| 4. | ಪಿ.ಸಿ.ಕೃಷ್ಣೇಗೌಡ | ಯಡವನಹಳ್ಳಿ, ಕೊಪ್ಪ ಹೋಬಳಿ, ಮದ್ದೂರು ತಾಲ್ಲೂಕು. | ಪಕ್ಷೇತರ | ಬಾಳೇಹಣ್ಣು |

| | | | | |
|---|---|---|---|---|
| 5. | ಹೆಚ್.ಆರ್.ಚಂದ್ರಶೇಖರಯ್ಯ | ಹುಲಿಗೆರೆಪುರ, ಮಾಲಗಾರನಹಳ್ಳಿ ಅಂಚೆ, ಮದ್ದೂರು ತಾಲ್ಲೂಕು. | ಪಕ್ಷೇತರ | ನಗಾರಿ |
| 6. | ಎನ್.ಸಿ.ಪುಟ್ಟರಾಜು | ನೀಲಕಂಠನಹಳ್ಳಿ, ಆಲೂರು ಅಂಚೆ, ಮದ್ದೂರು ತಾಲ್ಲೂಕು. | ಪಕ್ಷೇತರ | ವಿದ್ಯುತ್ ಕಂಬ |
| 7. | ಕೆ.ಹೆಚ್.ಯೋಗೇಶ | ಕರಡಕೆರೆ ಗ್ರಾಮ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು. | ಪಕ್ಷೇತರ | ಪಿಟೀಲು |
| 8. | ಜಿ.ಟಿ. ರವಿಕುಮಾರ್ | ಗೆಜ್ಜಲಗೆರೆ ಗ್ರಾಮ, ಕಸಬಾ ಹೋಬಳಿ, ಮದ್ದೂರು ತಾಲ್ಲೂಕು. | ಪಕ್ಷೇತರ | ಬ್ಯಾಟ್ಸ್‌ಮನ್ |
| 9. | ರವೀಂದ್ರ | ನವಿಲೆ ಗ್ರಾಮ, ಆತಗೂರು ಹೋಬಳಿ, ಮದ್ದೂರು ತಾಲ್ಲೂಕು. | ಪಕ್ಷೇತರ | ಟೋಪಿ |
| 10. | ಕೆ.ಶಿವಾನಂದ | ಪೇಟೆ ಬೀದಿ, ಮದ್ದೂರು ಟೌನ್. | ಪಕ್ಷೇತರ | ದೂರದರ್ಶನ |
| 11. | ಎಸ್. ಶಂಕರಮೂರ್ತಿ | ಕಾಡುಕೊತ್ತನಹಳ್ಳಿ ಗ್ರಾಮ/ಅಂಚೆ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು. | ಪಕ್ಷೇತರ | ತೆಂಗಿನಕಾಯಿ |
| 12. | ಶಂಭುಲಿಂಗೇಗೌಡ | ದೇಶವಳ್ಳಿ ಗ್ರಾಮ, ಕಿರುಗಾವಲು ಅಂಚೆ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. | ಪಕ್ಷೇತರ | ರೈಲ್ವೆ ಇಂಜಿನ್ |

ಸ್ಥಳ: ಮದ್ದೂರು
ದಿನಾಂಕ: 13.12.2008

**ಆರ್. ಲತಾ**
ಚುನಾವಣಾಧಿಕಾರಿ,
187 – ಮದ್ದೂರು ವಿಧಾನಸಭಾ ಕ್ಷೇತ್ರ

**ಬಿ.ವಿ.ಕುಲಕರ್ಣಿ**
ಜಂಟಿ ಮುಖ್ಯ ಚುನಾವಣಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಿಆಸುಇ (ಚುನಾವಣೆಗಳು)

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೧೫, ೨೦೦೮ (ಮಾರ್ಗಶಿರ ೨೪, ಶಕ ವರ್ಷ ೧೯೩೦ | ನಂ. ೧೩೨೨ |
|---|---|---|

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಇಡಿ 06 ರಾಯುಸೇ 06, ಬೆಂಗಳೂರು, ದಿನಾಂಕ : 15ನೇ ಡಿಸೆಂಬರ್, 2008**

ಎನ್.ಸಿ.ಸಿ. ಇಲಾಖೆಯಲ್ಲಿನ 02 ಪ್ರಥಮ ದರ್ಜೆ ಸಹಾಯಕರ ಹಾಗೂ 06 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಬ್ಯಾಕ್‌ಲಾಗ್ ಅಡಿ ವಿಶೇಷ ನೇಮಕಾತಿಗಾಗಿ ಅರ್ಹ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 06 ರಾಯುಸೇ 2006, ದಿನಾಂಕ : 08-08-2008ರಲ್ಲಿ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು

ದಿನಾಂಕ : 16-08-2008ರ ಕರ್ನಾಟಕ ರಾಜ್ಯ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಈ ರೀತಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಲ್ಲಿ ಶ್ರೀಮತಿ ಪ್ರತಿಭಾ ಎಸ್., ಶ್ರೀಮತಿ ಮಂಜುಳಾ ಮಜುಮ್‌ದಾರ್, ಮತ್ತು ಶ್ರೀ ಲಕ್ಷ್ಮಣ ತಲವಾರ್ ಇವರು ಪರಿಶಿಷ್ಟ ಜಾತಿಗೆ ಸೇರಿರುವುದಿಲ್ಲ ಎಂಬುದಾಗಿ ತಿಳಿದುಬಂದಿರುತ್ತದೆ. ಆ ಹಿನ್ನೆಲೆಯಲ್ಲಿ ದಿನಾಂಕ : 08-08-2008ರ ಅಧಿಸೂಚನೆಯನ್ನು 'ರದ್ದುಪಡಿಸಿ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿ' ಯನ್ನು ಈ ಕೆಳಗಿನಂತೆ ಪ್ರಕಟಿಸಲಾಗಿದೆ.

ನೇಮಕಾತಿ ಪ್ರಾಧಿಕಾರ : ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಉನ್ನತ ಶಿಕ್ಷಣ)

ಇಲಾಖೆಯ ಹೆಸರು : ಎನ್.ಸಿ.ಸಿ. ಇಲಾಖೆ.

| **ಕ್ರಮ ಸಂಖ್ಯೆ** | **ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ:ಶ್ರೀಮತಿ** | **ವಿದ್ಯಾರ್ಹತೆ** | **ಅಭ್ಯರ್ಥಿಯ ಜನ್ಮ ದಿನಾಂಕ** | **ಸಂಬಂಧಪಟ್ಟ ಅರ್ಹತಾ ಪರೀಕ್ಷೆಯಲ್ಲಿ ಪಡೆದ ಅಂಕಗಳು (ಶೇಕಡ)** | **ಮೀಸಲಾತಿ** |
|---|---|---|---|---|---|
| 1. | ಕಲಕಪ್ಪ ಎಸ್. ಮಾದರ್, ಮಾತರಂಗಿ ಹಳ್ಳಿ, ಗೋಗೇರಿ ಪೋಸ್ಟ್, ರೋಣಾ ತಾಲ್ಲೂಕ್, ಗದಗ ಜಿಲ್ಲೆ-582114. | ಬಿ.ಎಸ್ಸಿ. (ಕೃಷಿ) | 25-09-1976 | 77.4 | ಇತರೆ ಅಭ್ಯರ್ಥಿ |
| 2. | ದೀಪಾ ನದೇವಿನಮಣಿ, ಮನೆ ನಂ. 5, ಭಾವಿಕಟ್ಟಿ ಫ್ಲ್ಯಾಟ್, ಶಂಕರಮಠ ಹತ್ತಿರ, ವೈ.ಎಸ್. ಕಾಲೋನಿ, ಧಾರವಾಡ-580004. | ಬಿ.ಎಸ್ಸಿ. | 17-09-1978 | 73.81 | ಮಹಿಳಾ ಅಭ್ಯರ್ಥಿ |
| **ದ್ವಿತೀಯ ದರ್ಜೆ ಸಹಾಯಕರು** | | | | | |
| 1. | ಉಮ್ಮಣ್ಣ ಎಸ್.ವಿ., ಬಿನ್ ಸಿದ್ಧಾಪುರ ವೀರಪ್ಪ, ಪಲ್ಲಗಟ್ಟೆ ಪೋಸ್ಟ್, ಜಗಳೂರ್ ತಾಲ್ಲೂಕ್, ದಾವಣಗೆರೆ ಜಿಲ್ಲೆ-577513. | ಎಸ್.ಎಸ್.ಎಲ್.ಸಿ. | 01-06-1976 | 72.48 | ಇತರೆ ಅಭ್ಯರ್ಥಿ |
| 2. | ಮಂಜುನಾಥ್ ನಡೆವಿನಮನಿ, ಕೇರ್ ಆಫ್ ಎಸ್.ಎಂ. ಹೊಸಮನಿ, ಕರ್ನಾಟಕ ವಿಶ್ವವಿದ್ಯಾಲಯ, ಸ್ಟಾಫ್ ಕ್ವಾಟ್ರಸ್, ಮನೆ ನಂ. ಜೆ/9, ಧಾರವಾಡ-580003. | ಎಸ್.ಎಸ್.ಎಲ್.ಸಿ. | 18-06-1975 | 72.00 | ಇತರೆ ಅಭ್ಯರ್ಥಿ |
| 3. | ಪ್ರೇಮ.ರಾ.ಭಜಂತ್ರಿ, ಕೇರ್ ಆಫ್ ಬಿ.ಡಿ.ಭಜಂತ್ರಿ, ಕೆ.ಎಸ್.ಆರ್.ಟಿ.ಸಿ. ಕ್ವಾಟ್ರಸ್, ಮನೆ ನಂ. 84, ಬ್ಲಾಕ್ ನಂ. ಬಿ, ಗೋಕಲ ರೋಡ್ ಹುಬ್ಬಳ್ಳಿ | ಎಸ್.ಎಸ್.ಎಲ್.ಸಿ. | 25-02-1976 | 67.67 | ಮಹಿಳೆ |
| 4. | ಸುಮನ .ಕೆ, ಸುಭಾಷ್ ನಿವಾಸ, ತಡುಬಿದ್ರಿ ಅಂಚೆ, ಉಡುಪಿ ಜಿಲ್ಲೆ – 574111. | ಎಸ್.ಎಸ್.ಎಲ್.ಸಿ. | 06-10-1971 | 67.33 | ಮಹಿಳೆ |
| 5. | ಮೂರ್ತಿ ನಾಯಕ್, ಬಿನ್ ಸೋಮನಾಯಕ್, ಅಲಸಿನ | ಎಸ್.ಎಸ್.ಎಲ್.ಸಿ. | 16-06-1975 | 70.56 | ಗ್ರಾಮೀಣ |

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಶ್ರೀ:ಶ್ರೀಮತಿ | ವಿದ್ಯಾರ್ಹತೆ | ಅಭ್ಯರ್ಥಿಯ ಜನ್ಮ ದಿನಾಂಕ | ಸಂಬಂಧಪಟ್ಟ ಅರ್ಹತಾ ಪರೀಕ್ಷೆಯಲ್ಲಿ ಪಡೆದ ಅಂಕಗಳು (ಶೇಕಡ) | ಮೀಸಲಾತಿ |
|---|---|---|---|---|---|
| | ಮರದಹಳ್ಳಿ ಹಟ್ಟಿ, ಎಮ್ಮೆದೊಡ್ಡಿ ಅಂಚೆ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | | | | |

ಈ ತಾತ್ಕಾಲಿಕ ಆಯ್ಕೆ ಪಟ್ಟಿ ಕುರಿತಂತೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಸಂಬಂಧಪಟ್ಟ ಅಭ್ಯರ್ಥಿಗಳು ಈ ಅಧಿಸೂಚನೆ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಉನ್ನತ ಶಿಕ್ಷಣ), ಶಿಕ್ಷಣ ಇಲಾಖೆ, ಬಹುಮಹಡಿ ಕಟ್ಟಡ, ಡಾ.ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು-560001 ಇವರಿಗೆ ಸಲ್ಲಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸಾಮಾನ್ಯ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಡಿಸೆಂಬರ್ ೧೬, ೨೦೦೮ (ಮಾರ್ಗಶಿರ ೨೫, ಶಕ ವರ್ಷ ೧೯೩೦) | ನಂ. ೧೩೨೩ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕರ್ನಾಟಕ ಖನಿಜ ನೀತಿ, 2008 ಅನ್ನು ಪ್ರಕಟಿಸುವ ಕುರಿತು.

**ಪ್ರಸ್ತಾವನೆ:**

ಖನಿಜಗಳು ಮನುಕುಲಕ್ಕೆ ಅತ್ಯಗತ್ಯವಾದ ಸಹಜವಾದ, ಸೀಮಿತವಾದ ಮತ್ತು ನವೀಕರಿಸಲಾಗದ ಅಮೂಲ್ಯ ಸಂಪನ್ಮೂಲಗಳು. "ಖನಿಜಗಳು ರಾಜ್ಯದ ನಿಧಿ" ಯಾದ್ದರಿಂದ, ರಾಜ್ಯವು ಖನಿಜಗಳನ್ನು ತೆಗೆಯುವ ಬಗ್ಗೆ ಕ್ರಮಬದ್ಧವಾದ, ವೈಜ್ಞಾನಿಕವಾದ ಮತ್ತು ಸದಾಕಾಲ ಲಭ್ಯವಾಗುವ ರೀತಿಯಲ್ಲಿ ಅಭಿವೃದ್ಧಿಯ ಯೋಜನೆ ರೂಪಿಸುವ ಅವಶ್ಯಕತೆಯಿದ್ದು ದೀರ್ಘಕಾಲದ ಗುರಿ ಮತ್ತು ಮುಂದಿನ ಯೋಜನೆಗಳು ಈ ಖನಿಜಗಳ ಬಳಕೆಯಲ್ಲಿ ಮಾರ್ಗದರ್ಶನವಾಗಿರಬೇಕು ಎಂಬ ನಿಟ್ಟಿನಲ್ಲಿ ಹಾಗೂ ಈ ಗುರಿಗಳು ಮತ್ತು ಯೋಜನೆಗಳು ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬದಲಾಗುವುದರಿಂದ, ಅದಕ್ಕನುಗುಣವಾಗಿ ಕರ್ನಾಟಕ ಖನಿಜ ನೀತಿಯು ರೂಪುಗೊಳ್ಳಬೇಕಾದ ಅವಶ್ಯಕತೆ ಇರುವುದನ್ನು ಸರ್ಕಾರವು ಮನಗಂಡು, ಗಣಿಗಾರಿಕೆಗೆ ಸಂಬಂಧಿಸಿದ ವಿವಿಧ ಸಂಸ್ಥೆಗಳ ಮತ್ತು ಎನ್.ಜಿ.ಓ.ಗಳ ಸಲಹೆ ಮತ್ತು ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಹಾಗೂ ಭಾರತ ಸರ್ಕಾರ ಗಣಿ ಮಂತ್ರಾಲಯವು ಇತ್ತೀಚೆಗೆ ಪ್ರಕಟಿಸಿರುವ ರಾಷ್ಟ್ರೀಯ ಖನಿಜ ನೀತಿ 2008ರಿಂದ ಕೆಲವೊಂದು ಪ್ರಮುಖ ಅಂಶಗಳನ್ನು ಅಳವಡಿಸಿಕೊಂಡು, ಪ್ರಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ಖನಿಜ ನೀತಿ, 2000 ರ ಬದಲಿಗೆ, ಕರ್ನಾಟಕ ಖನಿಜ ನೀತಿ, 2008 ಅನ್ನು ಪ್ರಕಟಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ಸಿಐ.221:ಎಂಎಂಎಂ.2006, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಪ್ರಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ಖನಿಜ ನೀತಿ, 2000 ರ ಬದಲಿಗೆ ಈ ಆದೇಶದೊಂದಿಗೆ ಲಗತ್ತಿಸಿರುವ ಕರ್ನಾಟಕ ಖನಿಜ ನೀತಿ, 2008 ಅನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಉಮೇಶ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ಕರ್ನಾಟಕ ಖನಿಜ ನೀತಿ, 2008

## 1. ಪೀಠಿಕೆ:–

ಖನಿಜಗಳು ಮನುಕುಲಕ್ಕೆ ಅತ್ಯಗತ್ಯವಾದ ಸಹಜವಾದ, ಸೀಮಿತವಾದ ಮತ್ತು ನವೀಕರಿಸಲಾಗದ ಅಮೂಲ್ಯ ಸಂಪನ್ಮೂಲಗಳು. "ಖನಿಜಗಳು ರಾಜ್ಯದ ನಿಧಿ" ಯಾದ್ದರಿಂದ, ರಾಜ್ಯವು ಖನಿಜಗಳನ್ನು ತೆಗೆಯುವ ಬಗ್ಗೆ ಕ್ರಮಬದ್ಧವಾದ, ವೈಜ್ಞಾನಿಕವಾದ ಮತ್ತು ಸದಾಕಾಲ ಲಭ್ಯವಾಗುವ ರೀತಿಯಲ್ಲಿ ಅಭಿವೃದ್ಧಿಯ ಯೋಜನೆ ರೂಪಿಸಬೇಕು. ದೀರ್ಘಕಾಲದ ಗುರಿ ಮತ್ತು ಮುಂದಿನ ಯೋಜನೆಗಳು ಈ ಖನಿಜಗಳ ಬಳಕೆಯಲ್ಲಿ ಮಾರ್ಗದರ್ಶನವಾಗಿರಬೇಕು. ಈ ಗುರಿಗಳು ಮತ್ತು ಯೋಜನೆಗಳು ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬದಲಾಗುವುದರಿಂದ, ಅದಕ್ಕನುಗುಣವಾಗಿ ಕರ್ನಾಟಕ ಖನಿಜ ನೀತಿಯೂ ರೂಪುಗೊಳ್ಳಬೇಕು. ಆದ್ದರಿಂದ, **ಕರ್ನಾಟಕ ಖನಿಜ ನೀತಿ, 2000** ಅನ್ನು ಮತ್ತೆ ಪರಿಶೀಲಿಸುವುದು ಅವಶ್ಯಕವಿದೆ.

1.1: ಭಾರತದಲ್ಲಿ, ಕರ್ನಾಟಕ ಖನಿಜಗಳಿಂದ ಸಮೃದ್ಧವಾದ ರಾಜ್ಯ. ಕರ್ನಾಟಕ 29 ಜಿಲ್ಲೆಗಳನ್ನೊಳಗೊಂಡಿದ್ದು, 1.92 ಲಕ್ಷ ಚ.ಕಿ.ಮೀ.ಗಳಿಗೆ ಆವರಿಸಿದೆ. ರಾಜ್ಯವು ಪ್ರಿಕೇಂಬ್ರಿಯನ್‌ನಿಂದ ಇತ್ತೀಚಿನವರೆಗೆ ರಚನೆಯಾಗಿರುವ ವ್ಯಾಪಕ ಹಾಗೂ ವಿಭಿನ್ನ ಭೂಗರ್ಭ ಪದರಗಳು ಮತ್ತು 40,000 ಚದರ ಕಿ.ಮೀ. ಗಳಷ್ಟು ಹಸಿರು ಶಿಲಾಪಟ್ಟಿಯಿಂದ ಕೂಡಿದೆ. ಇದು ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣದ ಅದಿರು, ಮ್ಯಾಂಗನೀಸ್, ಸುಣ್ಣದಕಲ್ಲು, ಡೊಲೋಮೈಟ್, ಕ್ರೋಮೈಟ್, ಮ್ಯಾಗ್ನಸೈಟ್ ಮತ್ತು ಇತರೆ ಉಪಯುಕ್ತ ಶಿಲಾರಚನೆಗಳಾದ ಗ್ರಾನೈಟ್ ಖನಿಜ ಸಂಪತ್ತಿನಿಂದ ತುಂಬಿದೆ.

1.2: ರಾಜ್ಯದಲ್ಲಿ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿ, ಚಿನ್ನ, ಪ್ಲಾಟಿನಂ ಮತ್ತು ಪ್ರಶಸ್ತ ಮತ್ತು ಅರೆ ಪ್ರಶಸ್ತ ಖನಿಜಗಳ ಪರಿಶೋಧನೆಗೆ ಅತ್ಯಧಿಕ ಅವಕಾಶವಿದೆ. ಹಾಗೆಯೇ, ರಾಜ್ಯದಲ್ಲಿ ರಿಫ್ರಾಕ್ಟರಿ ಮತ್ತು ಸಿರಾಮಿಕ್ ಖನಿಜಗಳ ಪರಿಶೋಧನೆಗೂ ಅತೀ ಹೆಚ್ಚಿನ ಅವಕಾಶವಿದೆ.

1.3: ಕರ್ನಾಟಕವು ಪ್ರಗತಿಪರ ಕೈಗಾರಿಕಾ ಅಭಿವೃದ್ಧಿ ಕಾರ್ಯಕ್ರಮವನ್ನು ಅಳವಡಿಸಿ ಕೊಂಡ ಹೆಮ್ಮೆಗೆ ಪಾತ್ರವಾಗಿದೆ ಮತ್ತು ಉಕ್ಕು ಮತ್ತು ಸಿಮೆಂಟ್ ವಲಯ ಗಳ ರಚನೆಯನ್ನು ಘೋಷಿಸಿದೆ. ಈ ಅವಶ್ಯಕತೆಯನ್ನು ಪೂರೈಸಲು ಖನಿಜಾಧಾರಿತ ಕಚ್ಚಾ ಪದಾರ್ಥಗಳು ಅತ್ಯಂತ ಅಗತ್ಯವಾಗಿವೆ.

## 2. ಸದ್ಯದ ಗಣಿ ಚಟುವಟಿಕೆ:–

.1: ಕೋಲಾರ ಚಿನ್ನದ ಗಣಿ ವ್ಯವಸ್ಥಿತವಾಗಿ ಕಾರ್ಯಾಚರಣೆ ನಡೆಸುತ್ತಿದ್ದ ಅತ್ಯಂತ ಹಳೆಯ ಚಿನ್ನದ ಗಣಿ, ಈಗ ಆರ್ಥಿಕ ಹಾಗೂ ತಾಂತ್ರಿಕ ಕಾರಣಗಳಿಗಾಗಿ ಮುಚ್ಚಲಾಗಿದೆ. ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಒಂದೇ ಈಗ ರಾಜ್ಯದಲ್ಲಿ ಚಿನ್ನ ಉತ್ಪಾದಿಸುತ್ತಿರುವ ಗಣಿ. ಇದರ ಸರಾಸರಿ ವಾರ್ಷಿಕ ಉತ್ಪಾದನೆ ಸುಮಾರು 2.8 ಟನ್ನುಗಳು.

2.2: ರಾಜ್ಯದಲ್ಲಿ 9000 ಮಿಲಿಯನ್ ಟನ್‌ಗಳಿಗೂ ಅಧಿಕ ಕಬ್ಬಿಣದ ಅದಿರಿನ ಸಂಪನ್ಮೂಲವಿದ್ದು, ಅದರಲ್ಲಿ ಹೆಚ್ಚಿನ ಭಾಗವು ಮ್ಯಾಗ್ನಟೈಟ್. 2007–08 ರ ಅವಧಿಯಲ್ಲಿ ರಾಜ್ಯದ ಕಬ್ಬಿಣದ ಅದಿರಿನ ಉತ್ಪಾದನೆ 47 ದಶಲಕ್ಷ ಟನ್ನುಗಳನ್ನು ದಾಟಿದೆ. ಈ ಉತ್ಪಾದನೆಯ ಬಹುಭಾಗವು ಬಳ್ಳಾರಿ, ಹೊಸಪೇಟೆ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದು, ಉಳಿದ ಭಾಗವು ಚಿತ್ರದುರ್ಗ, ತುಮಕೂರು ಮತ್ತು ಬಾಗಲಕೋಟೆ ಜಿಲ್ಲೆಗಳಿಂದ ಲಭ್ಯವಾಗಿದೆ. ಕೆಲವೇ ಉಕ್ಕು, ಸ್ಪಾಂಜ್ ಮತ್ತು ಪಿಗ್ ಐರನ್ ಸ್ಥಾವರಗಳು ಸಿಂಟರಿಂಗ್ ಮತ್ತು ಪೆಲೆಟ್ ಘಟಕಗಳನ್ನು ಹೊಂದಿರುವುದರಿಂದ, ಬಹಳಷ್ಟು ಕಬ್ಬಿಣದ ಅದಿರಿನ ಪುಡಿಯನ್ನು ರಫ್ತು ಮಾಡಲಾಗುತ್ತಿದೆ.

2.3: ರಾಜ್ಯದ ಮತ್ತೊಂದು ಪ್ರಮುಖ ಖನಿಜ ಸಂಪನ್ಮೂಲ ಎಂದರೆ ಸುಣ್ಣದಕಲ್ಲು. ಅಂದಾಜು ಮಾಡಲಾದ ಇದರ ಸಂಪನ್ಮೂಲ 51,000 ದಶಲಕ್ಷ ಟನ್ನುಗಳು. ಇದು ಗುಲ್ಬರ್ಗಾ, ಬಾಗಲಕೋಟೆ, ಬೆಳಗಾಂ, ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ ಹರಡಿದೆ. ಈಗ ಉತ್ಪಾದನೆಯಾಗುತ್ತಿರುವ ಸುಮಾರು 14 ದಶಲಕ್ಷ ಟನ್ನುಗಳು, ಈ ಜಿಲ್ಲೆಗಳಲ್ಲಿ ಈಗಿರುವ 10 ಸಿಮೆಂಟ್ ಸ್ಥಾವರಗಳಿಗೆ ಪೂರೈಕೆಯಾಗುತ್ತಿದೆ. ಪರಿಸರ ನಾಶವಾಗದ ರೀತಿಯಲ್ಲಿ ಖನಿಜಗಳನ್ನು ಗರಿಷ್ಠ ಮಟ್ಟದಲ್ಲಿ ಬಳಸಿ ಕೊಂಡು, ಇನ್ನೂ ಕೆಲವು ಪರಿಸರ ಸ್ನೇಹಿ ಸಿಮೆಂಟ್ ಸ್ಥಾವರಗಳನ್ನು ಸ್ಥಾಪಿಸಲು ಅವಕಾಶವಿದೆ.

2.4: ರಾಜ್ಯವು ಇತರ ಖನಿಜಗಳಾದ ಕ್ರೋಮೈಟ್, ಕಯನೈಟ್, ಡೋಲೋಮೈಟ್, ಮ್ಯಾಗ್ನಸೈಟ್, ಬಾಕ್ಸೈಟ್, ಫೆಲ್ಸೈಟ್, ಡ್ಯೂನೈಟ್ ಮತ್ತು ಕ್ವಾರ್ಟ್ಜ್‌ಗಳನ್ನೂ ಸಹ ಉತ್ಪಾದಿಸುತ್ತದೆ. **ಅನುಬಂಧ–I**ರಲ್ಲಿ ಖನಿಜಾವಾರು ಗುತ್ತಿಗೆ ಹಾಗೂ ಉತ್ಪಾದನೆಯ ವಿವರಗಳನ್ನು ನೀಡಲಾಗಿದೆ.

2.5: ಕರ್ನಾಟಕ ರಾಜ್ಯವು ವಿರಳವಾದ ಗ್ರಾನೈಟ್ ಸಂಪತ್ತನ್ನು ಹೊಂದಿದೆ. ಈ ಗ್ರಾನೈಟ್ ಸಂಪತ್ತಿನಿಂದ ಕರ್ನಾಟಕ ರಾಜ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸುವಂತಾಯಿತು. ಪ್ರಸ್ತುತ ಖನಿಜ ನೀತಿಯಲ್ಲಿನ ಬದಲಾವಣೆಗಳ ಮೂಲಕ ಹಿಂದಿನ ವೈಭವವನ್ನು ಮರಳಿ ಪಡೆಯುವುದು ಅವಶ್ಯಕವಿದೆ. 2006–07ನೇ ಅವಧಿಯಲ್ಲಿ ಗ್ರಾನೈಟ್ ಉತ್ಪಾದನೆಯು 1.96 ಲಕ್ಷ ಘ.ಮೀ. ಇದ್ದು, ವಿವಿಧ ರೀತಿಯ ಗ್ರಾನೈಟ್, ಅವುಗಳ ನಿಕ್ಷೇಪ ಮತ್ತು ಗಣಿಗುತ್ತಿಗೆಗಳ ವಿವರಗಳನ್ನು **ಅನುಬಂಧ–II** ರಲ್ಲಿ ನೀಡಿದೆ.

## 3. ಖನಿಜಗಳ ನಿಯಂತ್ರಣ:–

3.1: ಖನಿಜಗಳ ನಿರ್ವಹಣೆಯು ಕೇಂದ್ರದ ಹಾಗೂ ರಾಜ್ಯದ ಜವಾಬ್ದಾರಿಯಾಗಿದ್ದು, ಭಾರತ ಸಂವಿಧಾನದ ಏಳನೇ ಅನುಸೂಚಿಯ ಅಡಿಯಲ್ಲಿ, ಕೇಂದ್ರ ಪಟ್ಟಿಯ 54ನೇ ನಮೂದಿನಲ್ಲಿ ಮತ್ತು ರಾಜ್ಯಪಟ್ಟಿಯ 23ನೇ ನಮೂದಿನಲ್ಲಿ ಸೇರಿದೆ.

3.2: ಗಣಿಗಳು ಮತ್ತು ಖನಿಜಗಳ (ಅಭಿವೃದ್ಧಿ ಮತ್ತು ನಿಯಂತ್ರಣ) ಅಧಿನಿಯಮ, 1957(ಎಂ.ಎಂ.ಡಿ&ಆರ್ ಅಧಿನಿಯಮ), ಖನಿಜ ರಿಯಾಯಿತಿ ನಿಯಮಗಳು, 1960 (ಎಂ.ಸಿ.ಆರ್.) ಮತ್ತು ಖನಿಜಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ನಿಯಮಗಳು, 1988 (ಎಂ.ಸಿ.ಡಿ.ಆರ್.) ಇವು ಖನಿಜಗಳ ಸಂರಕ್ಷಣೆ ಮತ್ತು ವ್ಯವಸ್ಥಿತ ಅಭಿವೃದ್ಧಿಗಾಗಿ ಭಾರತ ಸರ್ಕಾರ ಹೊರಡಿಸಿದ ಅಧಿನಿಯಮಗಳು. ಈ ನಿಯಮಗಳು, ಇಂಧನ ಖನಿಜಗಳು, ಪರಮಾಣು ಖನಿಜಗಳು ಮತ್ತು ಉಪ ಖನಿಜಗಳನ್ನು ಹೊರತುಪಡಿಸಿ ಎಲ್ಲಾ ಖನಿಜಗಳಿಗೆ ಅನ್ವಯಿಸುತ್ತವೆ. ಎಂ.ಎಂ.(ಡಿ&ಆರ್) ಅಧಿನಿಯಮದ 1ನೇ ಅನುಸೂಚಿಯ 'ಸಿ' ಭಾಗದಲ್ಲಿ ನಿರ್ದಿಷ್ಟಪಡಿಸಿದ ಖನಿಜಗಳ ಸಂಬಂಧದಲ್ಲಿ (**ಅನುಬಂಧ–III**) ಖನಿಜಗಳ ರಿಯಾಯಿತಿ ನೀಡಿಕೆಗೆ ಭಾರತ ಸರ್ಕಾರದ ಪೂರ್ವಾನುಮೋದನೆ ಅಗತ್ಯವಾಗಿದೆ.

3.3: ಉಪಖನಿಜಗಳ ಸಂಬಂಧದಲ್ಲಿ ನಿಯಮ ರಚನಾಧಿಕಾರವನ್ನು ಎಂ.ಎಂ. (ಡಿ&ಆರ್) ಅಧಿನಿಯಮದ 15ನೇ ಅನುಚ್ಛೇದದಡಿಯಲ್ಲಿ ರಾಜ್ಯಗಳಿಗೆ ಪ್ರತ್ಯಾಯೋಜಿಸಲಾಗಿದೆ. ಈ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ(ಕೆ.ಎಂ.ಎಂ.ಸಿ.ಆರ್.), 1994ಅನ್ನು ರಚಿಸಲಾಗಿದೆ. 1957ರ ಎಂ.ಎಂ.(ಡಿ&ಆರ್) ಅಧಿನಿಯಮದ 23(ಸಿ) ಅನುಚ್ಛೇದ, ಅಕ್ರಮ ಗಣಿಗಾರಿಕೆ, ಸಾಗಣೆ ಮತ್ತು ಖನಿಜಗಳ ಸಂಗ್ರಹಣೆ ಯನ್ನು ತಡೆಯುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯಗಳಿಗೆ ಅಧಿಕಾರ ನೀಡುತ್ತದೆ. ರಾಜ್ಯ ಸರ್ಕಾರ ಈ ನಿಯಮಗಳನ್ನೂ ಸಹ ರಚಿಸಿದೆ.

3.4: ಪೂರ್ವಾನ್ವೇಷಣಾ ಪರವಾನಗಿ, ಅನ್ವೇಷಣಾ ಪರವಾನಗಿ ಅಥವಾ ಗಣಿಗುತ್ತಿಗೆ ಮಂಜೂರಾತಿ, ಎಂ.ಎಂ.(ಡಿ&ಆರ್)ಕಾಯ್ದೆ, 1957 ಮತ್ತು ಎಂ.ಸಿ.ಆರ್., 1960 ಇವುಗಳಿಗೆ ಒಳಪಟ್ಟಿದೆ. ನಿರ್ದಿಷ್ಟ ಪ್ರಧಾನ ಖನಿಜಗಳಿಗೆ ರಾಜ್ಯ ಸರ್ಕಾರವು ಭಾರತ ಸರ್ಕಾರದ ಪೂರ್ವಾನುಮತಿ ಪಡೆದು ಪೂರ್ವಾನ್ವೇಷಣಾ ಪರವಾನಗಿ, ಅನ್ವೇಷಣಾ ಪರವಾನಗಿ ಅಥವಾ ಗಣಿಗುತ್ತಿಗೆ ನೀಡುತ್ತದೆ. ಮೊದಲು ಬಂದವರಿಗೆ ಮೊದಲ ಆದ್ಯತೆಯ ಆಧಾರದ ಮೇಲೆ ಅನ್ವೇಷಣೆಗೆ ಹಾಗೂ ಖನಿಜಗಳನ್ನು ತೆಗೆಯಲು ಪರವಾನಗಿ ನೀಡಲಾಗುವುದು. 10,000 ಚದರ ಕಿ.ಮೀ.ಗಳ ವಿಸ್ತಾರದ ಮೇಲೆ ವೈಮಾನಿಕ ಸಮೀಕ್ಷೆ ನಡೆಸಲು, ಭಾರತೀಯ ರಾಷ್ಟ್ರೀಯನಾಗಿರುವ ಯಾರೇ ವ್ಯಕ್ತಿಗೆ ಅಥವಾ 1956ರ ಕಂಪೆನಿಗಳ ಅಧಿನಿಯಮದ 3ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಪರಿಭಾಷಿಸಿದ ಕಂಪೆನಿಗೆ ಪೂರ್ವಭಾವಿ ಅನ್ವೇಷಣೆ ಅನುಮತಿ ಯನ್ನು ನೀಡಬಹುದು. ಆದರೆ, ಒಂದು ಲೈಸೆನ್ಸು 5000 ಚ.ಕಿ.ಮೀ. ಗಳನ್ನು ಮೀರತಕ್ಕದ್ದಲ್ಲ. ಅಧಿನಿಯಮ ಮತ್ತು ನಿಯಮಗಳು 25 ಚದರ ಕಿ.ಮೀ.ಗಳನ್ನು ಮೀರದ ಒಟ್ಟು ವಿಸ್ತಾರವನ್ನು ಒಳಗೊಳ್ಳಲು ಅನ್ವೇಷಣಾ ಲೈಸೆನ್ಸುಗಳನ್ನು ನೀಡಲು ಅವಕಾಶ ಕಲ್ಪಿಸುತ್ತದೆ. ಅಧಿನಿಯಮ ಮತ್ತು ನಿಯಮಗಳ ಪ್ರಕಾರ, ಗರಿಷ್ಠ 10 ಚ.ಕಿ.ಮೀ. ಪ್ರದೇಶಕ್ಕೆ ಗಣಿಗುತ್ತಿಗೆ ಯನ್ನು ಮಂಜೂರು ಮಾಡಬಹುದಾಗಿದೆ.

3.5: ಖನಿಜಗಳ ರಿಯಾಯಿತಿ ಹೊಂದಿರುವವರು, ಅನ್ವಯವಾಗುವ ಇತರೆ ಕಾಯ್ದೆಗಳಾದ ಅರಣ್ಯ (ಸಂರಕ್ಷಣಾ) ಕಾಯ್ದೆ, 1980, ಪರಿಸರ (ಸಂರಕ್ಷಣಾ) ಕಾಯ್ದೆ, 1986 ಹಾಗೂ ಜಲ (ಮಾಲಿನ್ಯ ನಿಯಂತ್ರಣ ಮತ್ತು ತಡೆಗಟ್ಟುವುದು) ಕಾಯ್ದೆ, 1974 ಮತ್ತು ವಾಯು (ಮಾಲಿನ್ಯ ನಿಯಂತ್ರಣ ಮತ್ತು ತಡೆಗಟ್ಟುವುದು) ಕಾಯ್ದೆ, 1981ಗಳನ್ನು ಪಾಲಿಸಬೇಕು.

## 4. ರಾಷ್ಟ್ರೀಯ ಖನಿಜ ನೀತಿ, 2008:–

4.1: ಭಾರತ ಸರ್ಕಾರವು ರಾಷ್ಟ್ರೀಯ ಖನಿಜ ನೀತಿ, 1993ರ ಅಡಿಯಲ್ಲಿ ಪರಮಾಣು ಖನಿಜಗಳು ಹಾಗೂ ಇಂಧನ ಖನಿಜಗಳನ್ನು ಹೊರತುಪಡಿಸಿ ಬಹುಪಾಲು ಖನಿಜಗಳಿಗೆ ಲೈಸೆನ್ಸ್ ಹಾಗೂ ಗುತ್ತಿಗೆ ನೀಡುವುದನ್ನು ಉದಾರೀಕರಿಸಿದೆ.

4.2: ರಾಷ್ಟ್ರೀಯ ಖನಿಜ ನೀತಿ, 2008ರ ಮುಖ್ಯ ಅಂಶಗಳು:–

- ಸೂಕ್ತ ಪರಿಶೋಧನೆ ಹಾಗೂ ಅನ್ವೇಷಣೆಯ ತರುವಾಯ ವೈಜ್ಞಾನಿಕ ವಿಧಾನ ಗಳನ್ನಾಧರಿಸಿ ದೇಶದ ಭೂಗರ್ಭ ಸಂಪತ್ತಿನ ಪ್ರಯೋಜನ ಪಡೆಯುವುದು.

- ಅದಿರಿನಿಂದ ಖನಿಜ ಹಾಗೂ ಲೋಹಗಳನ್ನು ತೆಗೆಯಲು ಅತ್ಯಾಧುನಿಕ ತಂತ್ರಜ್ಞಾನ ಬಳಸಿ, ಗಣಿಗಾರಿಕೆಯಿಂದುಂಟಾಗುವ ತ್ಯಾಜ್ಯ ಎಳ್ಳಷ್ಟೂ ಇರದಂತೆ ಮಾಡುವುದಕ್ಕೆ ಒತ್ತು ನೀಡುವುದು.

- ಸಂಪನ್ಮೂಲಗಳು ಹಾಗೂ ಮೀಸಲು ಭೂಸಂಪತ್ತಿನ ವಿವರಪಟ್ಟಿಯನ್ನು ತಯಾರಿಸುವುದು, ಗಣಿಗಾರಿಕಾ ಪ್ರದೇಶದ ಪಟ್ಟಿ, ಖನಿಜ ಭೂಪಟವನ್ನು ಸಿದ್ಧಪಡಿಸುವುದಕ್ಕೆ ಆದ್ಯತೆ ನೀಡುವುದು.

- ಮಾನವ ಶಕ್ತಿ, ಸಲಕರಣೆ ಹಾಗೂ ಪರಿಣಿತರನ್ನು ಒದಗಿಸಿ ರಾಜ್ಯಗಳ ಗಣಿ ಹಾಗೂ ಭೂವಿಜ್ಞಾನ ನಿರ್ದೇಶನಾಲಯಗಳನ್ನು ಬಲಗೊಳಿಸುವುದು.

- ಗಣಿಗಾರಿಕೆಯು ಅರಣ್ಯ ಹಾಗೂ ಪರಿಸರದೊಂದಿಗೆ ನಿಕಟ ಸಂಬಂಧ ಹೊಂದಿದೆ. ಆದ್ದರಿಂದ, ಜೀವಿ ಪರಿಸರ ಸಮತೋಲನವನ್ನು ಪುನ: ಸ್ಥಾಪಿಸಲು ಸೂಕ್ತ ಕ್ರಮ ಕೈಗೊಂಡು ಗಣಿಗಾರಿಕೆ ನಡೆಸುವ ಬಗ್ಗೆ ಖಚಿತಪಡಿಸಿಕೊಳ್ಳಲು ಸೂಕ್ತ ಕಾರ್ಯ ಚೌಕಟ್ಟನ್ನು ರಚಿಸುವುದು.

- ಆಧುನಿಕ ಗಣಿಗಾರಿಕಾ ಸಲಕರಣೆ, ಯಂತ್ರೋಪಕರಣಗಳು, ಕುಶಲ ಹಾಗೂ ಕುಶಲವಲ್ಲದ ಮಾನವ ಶಕ್ತಿಯನ್ನು ಬಳಸುವ ಮೂಲಕ ವೈಜ್ಞಾನಿಕ ಗಣಿಗಾರಿಕಾ ವಿಧಾನಗಳನ್ನು ಉತ್ತೇಜಿಸುವುದು.

- ಮೌಲ್ಯವರ್ಧನೆಗೆ ಹೆಚ್ಚಿನ ಉತ್ತೇಜನ ನೀಡಲಾಗುತ್ತದೆ. ಸ್ವತಂತ್ರ ಉದ್ಯಮವಾದ ಖನಿಜ ವಲಯದ ಬೆಳವಣಿಗೆಗೆ ಮೌಲ್ಯವರ್ಧನೆ ಪೂರಕವಾಗುವಂತೆ ಮಾಡುವುದು.

- ಖನಿಜಗಳನ್ನು ಮುಂದಿನ ತಲೆಮಾರುಗಳಿಗಾಗಿ ರಕ್ಷಿಸುವುದು.

- ಸರ್ಕಾರಿ ಹಾಗೂ ಖಾಸಗಿ ಸಹಭಾಗಿತ್ವದ ಮೂಲಕ ಸೂಕ್ತ ಮೂಲಭೂತ ಸೌಕರ್ಯಗಳನ್ನು ಸೃಜಿಸುವುದು.

- ನೈಸರ್ಗಿಕ ಸಂಪನ್ಮೂಲಗಳು ವ್ಯರ್ಥವಾಗಿ ಹೋಗದಂತೆ ಸಣ್ಣ ಖನಿಜ ನಿಕ್ಷೇಪಗಳನ್ನು ಸರಿಯಾಗಿ ಒಗ್ಗೂಡಿಸಿ ನೋಡಿಕೊಳ್ಳುವುದು.

- ಗಣಿಗಾರಿಕೆ ಹೆಚ್ಚಿನ ಆರ್ಥಿಕ ತೊಂದರೆಗೆ ಸಿಲುಕುವ ಉದ್ಯಮ. ಆದ್ದರಿಂದ, ಸೂಕ್ತ ಹಣಕಾಸಿನ ಬೆಂಬಲದ ವ್ಯವಸ್ಥೆ ಮಾಡುವುದು.

- ವಿದೇಶೀ ವಿನಿಮಯ ಗಳಿಕೆಗಾಗಿ ಖನಿಜಗಳ ರಫ್ತನ್ನು ಮುಂದುವರಿಸುವುದು.

- ಗಣಿಗಳನ್ನು ಮುಚ್ಚಲು ವ್ಯವಸ್ಥಿತವಾಗಿ ಯೋಜಿಸಿ ಭೂಮಿಯನ್ನು ಮೂಲರೂಪಕ್ಕೆ ತರುವುದು.

- ಖನಿಜಗಳಿಂದ ಬರುವ ಆದಾಯದಲ್ಲಿ ಸಂಬಂಧಪಟ್ಟ ರಾಜ್ಯಗಳಿಗೆ, ತೆಗೆದ ಖನಿಜಗಳ ಮೌಲ್ಯದಲ್ಲಿ ನ್ಯಾಯಯುತವಾದ ಪಾಲು ಸಿಗುವಂತೆ ಖನಿಜ ಆದಾಯವನ್ನು ತರ್ಕಬದ್ಧವಾಗಿ ನಿಗದಿಪಡಿಸುವುದು.

- ಇಂಡಿಯನ್ ಬ್ಯೂರೋ ಆಫ್ ಮೈನ್ಸ್‌ನೊಂದಿಗೆ ಕಾರ್ಯಾಚರಣೆ ಹಾಗೂ ಹಣಕಾಸು ಸಂಬಂಧವಾಗಿ ಸಂಪರ್ಕ ಬೆಳೆಸಿಕೊಂಡು ಕಾನೂನುಬಾಹಿರ ಗಣಿಗಾರಿಕೆ ಸಮಸ್ಯೆಯನ್ನು ಬಗೆಹರಿಸಲು ರಾಜ್ಯಗಳಿಗೆ ನೆರವು ನೀಡುವುದು.

- ಖನಿಜಗಳ ಸಂಶೋಧನೆ ಹಾಗೂ ಅಭಿವೃದ್ಧಿಗೆ ಮೊದಲ ಆದ್ಯತೆ ನೀಡಿ ಸಂಶೋಧನೆ, ಅಭಿವೃದ್ಧಿ ಹಾಗೂ ತರಬೇತಿಗಾಗಿ ಸಮಗ್ರ ಸಾಂಸ್ಥಿಕ ರೂಪದ ಚೌಕಟ್ಟನ್ನು ರೂಪಿಸುವುದು.

4.3: ಎಲ್ಲದಕ್ಕೂ ಅನ್ವಯವಾಗುವ ಅನಿರ್ಬಂಧಿತ ಪೂರ್ವಭಾವಿ ಪರಿಶೀಲನೆಗೆ, ವಿಸ್ತೃತ ಪ್ರದೇಶ ಅನ್ವೇಷಣಾ ಲೈಸೆನ್ಸ್ ನೀಡಿಕೆಗೆ, ಅನಿರ್ಬಂಧಿತ ವರ್ಗಾವಣೆಗೆ ಹಾಗೂ ಉದ್ಯಮಿಗಳಿಗೆ ಅನುಭೋಗಾವಧಿಗೆ ಭದ್ರತೆ ನೀಡುವ ಮುಕ್ತ ನೀತಿಯನ್ನು ರಾಷ್ಟ್ರೀಯ ಖನಿಜ ನೀತಿ, 2008ರ ಮೂಲಕ ಪ್ರಾರಂಭಿಸಿ, ಮುಂಚಿನ ಕಾರ್ಯನೀತಿಯನ್ನು ಬದಲಿಸಲಾಗಿದೆ. ಭಾರತ ಸರ್ಕಾರವು ಇತರ ರಾಜ್ಯಗಳೊಂದಿಗೆ ಸಮಾಲೋಚಿಸಿ ಹಾಗೂ ಖನಿಜ ನೀತಿಯನ್ನಾಧರಿಸಿ ಎಂ.ಎಂ. (ಡಿ&ಆರ್)ಕಾಯ್ದೆ, ಎಂ.ಸಿ.ಆರ್. ಹಾಗೂ ಎಂ.ಸಿ.ಡಿ.ಆರ್.ಗಳನ್ನು ತಿದ್ದುಪಡಿ ಮಾಡುತ್ತಿದೆ. ಇದರಿಂದಾಗಿ ಹಾಗೂ ಕರ್ನಾಟಕದ ಖನಿಜ ವಲಯದ ಬೆಳವಣಿಗೆ ಹಾಗೂ ಅಭಿವೃದ್ಧಿಯನ್ನು ಕ್ರಮಬದ್ಧಗೊಳಿಸಿ ಖನಿಜ ನೀತಿಯಲ್ಲಿ ಹಾಗೂ ಸಂಬಂಧಪಟ್ಟ ಕಾನೂನುಗಳಲ್ಲಿ ಮಾರ್ಪಾಟು ಮಾಡಬೇಕಾದ ಅಗತ್ಯ ಉಂಟಾಗಿದೆ. ರಾಷ್ಟ್ರೀಯ ಖನಿಜ ನೀತಿಯ ನಿಲುವಿನ ಮೇರೆಗೆ, ಕರ್ನಾಟಕ ಸರ್ಕಾರವು ಖನಿಜ ನೀತಿ, 2008 ಅನ್ನು ರೂಪಿಸಿದೆ.

## 5. ಕರ್ನಾಟಕ ರಾಜ್ಯ ಖನಿಜ ನೀತಿ, 2008:–

ಕರ್ನಾಟಕ ರಾಜ್ಯವು, ದೇಶದಲ್ಲಿ ಕೆಲವೇ ಇತರ ರಾಜ್ಯಗಳಲ್ಲಿ, ತನ್ನದೇ ಆದ ದೂರದೃಷ್ಟಿ ಹೊಂದಿದ ಖನಿಜ ನೀತಿಯನ್ನು 2000ದಲ್ಲಿ ರೂಪಿಸಿದ ಖ್ಯಾತಿ ಹೊಂದಿದೆ. ಈ ಖನಿಜ ನೀತಿಯು ಅತ್ಯಾಧುನಿಕ ತಂತ್ರಜ್ಞಾನ ಬಳಕೆಯ ಗಣಿಗಾರಿಕೆ, ಗಣಿಗಾರಿಕಾ ಮಂಜೂರಾತಿಯಲ್ಲಿ ಪಾರದರ್ಶಕತೆ, ಖನಿಜದ ಮೌಲ್ಯವೃದ್ಧಿ ಇತ್ಯಾದಿಗಳನ್ನು ಹೊಂದಿತ್ತು.

5.1: ಆರ್ಥಿಕ ಸುಧಾರಣೆಯ ಮೂಲಕ ಮತ್ತು ಗಣಿ ಉದ್ದಿಮೆಯನ್ನು ಒಳಗೊಂಡಂತೆ ಅನೇಕ ಉದ್ದಿಮೆಗಳನ್ನು ಸ್ಥಾಪಿಸುವಲ್ಲಿ, ಕರ್ನಾಟಕ ರಾಜ್ಯವು ವಿವಿಧ ಕ್ಷೇತ್ರ ಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ಇತ್ತೀಚಿನ ಖನಿಜಾಭಿವೃದ್ಧಿ ಯಿಂದ, ಮಾರುಕಟ್ಟೆಯ ನಡೆ, ಮುಂದಿನ ಬೆಳವಣಿಗೆಗೆ ಪ್ರೋತ್ಸಾಹ ಮತ್ತು ಖನಿಜಾಧಾರಿತ ಕಚ್ಚಾವಸ್ತುಗಳ ಬೇಡಿಕೆಯಿಂದಾಗಿ ರಾಜ್ಯ ಖನಿಜ ನೀತಿಯನ್ನು ಪುನರ್ ಪರಿಶೀಲಿಸಬೇಕಾಗಿದೆ. ಖನಿಜ ಸಂಪತ್ತಿನ ಗಣಿಗಾರಿಕೆಯ ಬೆಳವಣಿಗೆಯ ಜೊತೆಗೆ ಮೌಲ್ಯವರ್ಧನೆಯ ಅವಶ್ಯಕತೆಗಳನ್ನು ವಿಸ್ತರಿಸಲು ಪ್ರೋತ್ಸಾಹ ನೀಡುವುದನ್ನು ಗಮನದಲ್ಲಿಟ್ಟುಕೊಂಡು ಖನಿಜ ನೀತಿ ರೂಪಿಸಲು ರಾಜ್ಯ ಸರ್ಕಾರ ಕ್ರಮ ಕೈಗೊಂಡಿದೆ.

5.2: **ರಾಜ್ಯ ಖನಿಜ ನೀತಿಯ ಮುಖ್ಯ ಧ್ಯೇಯೋದ್ದೇಶಗಳು ಮುಂದಿನಂತಿವೆ:–**

1. ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿ ರಾಜ್ಯದಲ್ಲಿನ ಖನಿಜ ಸಂಪನ್ಮೂಲಗಳನ್ನು ಪರಿಶೋಧಿಸಲು ಮಹತ್ವ ನೀಡುವುದು. ಖಾಸಗಿ ಹಾಗೂ ಸಾರ್ವಜನಿಕ ಉದ್ದಿಮೆ ಕಂಪೆನಿಗಳ ಬೆಂಬಲದಿಂದ ಅತ್ಯಾಧುನಿಕ ತಂತ್ರಜ್ಞಾನದ ಬಳಕೆಗೆ ಉತ್ತೇಜನ ನೀಡುವುದು;

2. ರಾಜ್ಯದಲ್ಲಿ ಈಗಿರುವ ಅರಣ್ಯ ಸಂಪತ್ತಿಗೆ ಮತ್ತು ಜೀವವೈವಿಧ್ಯತೆಗೆ ಧಕ್ಕೆ ಯಾಗದಂತೆ ಖನಿಜ ರಿಯಾಯಿತಿ ನೀಡುವ ನೀತಿಯನ್ನು ಅವಶ್ಯಕವಾಗಿ ಪಾಲಿಸುವುದು ಹಾಗೂ ಅತ್ಯಮೂಲ್ಯ ಅರಣ್ಯ ಸಂಪತ್ತನ್ನು ಗಣಿಗಾರಿಕೆಗೆ ಅನುಮತಿ ನೀಡುವಲ್ಲಿ ಕಾಪಾಡುವುದು;

3. ಗಣಿಗಾರಿಕೆಗೆ ರಿಯಾಯಿತಿ ನೀಡುವಲ್ಲಿ ಪಾರದರ್ಶಕತೆ ಉತ್ತೇಜಿಸುವುದು. ರಾಜ್ಯದಲ್ಲಿ ಉತ್ಪಾದಿಸಿದ ಖನಿಜಗಳಿಗೆ ಹೆಚ್ಚಿನ ಮೌಲ್ಯವರ್ಧನೆಗಾಗಿ, ಕೆಳಗಿನ ಕೈಗಾರಿಕೆಗಳಿಗೆ ಗರಿಷ್ಠ ಆರ್ಥಿಕ ವಿನಿಯೋಗವಾಗುವಂತೆ ಉತ್ತೇಜನ ನೀಡುವುದು. ಖನಿಜಗಳು ಲಭ್ಯವಿರುವ ಪ್ರದೇಶಗಳ ಹತ್ತಿರ ಕೈಗಾರಿಕೆ ಸ್ಥಾಪಿಸುವವರಿಗೆ ಖನಿಜ ರಿಯಾಯಿತಿಯಲ್ಲಿ ಆದ್ಯತೆ ನೀಡುವುದು;

4. ಖನಿಜಗಳ ಗಣಿಗಾರಿಕೆ ಮತ್ತು ಇತರೆ ಅಭಿವೃದ್ಧಿ ಕಾರ್ಯಗಳ ಮಧ್ಯೆ ಉಂಟಾಗುವ ಸಮಸ್ಯೆಗಳನ್ನು ಹೋಗಲಾಡಿಸುವ ಉದ್ದೇಶದಿಂದ ಸರ್ಕಾರವು ಖನಿಜ ಲಭ್ಯತೆಯಿರುವ ಪ್ರದೇಶಗಳನ್ನು ಪ್ರಕಟಿಸುವ ಸಾಧ್ಯತೆಯನ್ನು ಪರಿಶೀಲಿಸುವುದು;

5. ಅದಿರು ಕಣಗಳ (ಫೈನ್ಸ್) ದೇಶೀಯ ಬಳಕೆಗೆ ಹಾಗೂ ಕಡಿಮೆ ದರ್ಜೆಯ ಅದಿರಿನ ಖನಿಜ ಸಂಸ್ಕರಣೆಗೆ ಉತ್ತೇಜನ ನೀಡುವ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದು;

6. ಗಣಿಗಾರಿಕೆ ಯೋಜನೆಯ ಪ್ರಕಾರ ಗಣಿಗಾರಿಕೆ ನಡೆಯುತ್ತಿರುವುದನ್ನು ದೃಢಪಡಿಸಿಕೊಳ್ಳಲು ಮತ್ತು ಉತ್ಪಾದನೆಯಿಲ್ಲದೆ ಹೆಚ್ಚು ಖನಿಜ ಸಂಪತ್ತನ್ನು ಹೊಂದುವುದನ್ನು ಪ್ರೋತ್ಸಾಹಿಸದಿರಲು, ರಾಷ್ಟ್ರೀಯ:ಖಾಸಗೀ ಸಂಸ್ಥೆಗಳಿಗೆ ನೀಡಿರುವ ಗಣಿ ಪ್ರದೇಶಗಳನ್ನು ಪರಿಶೀಲಿಸುವುದು;

7. ರೈತರ ಜಮೀನಿನಲ್ಲಿ ದೊರೆಯುವ ಫ್ಲೋಟ್ ಕಬ್ಬಿಣದ ಖನಿಜವನ್ನು ಹೊರ ತೆಗೆಯಲು ಹಾಗೂ ಇಂತಹ ಜಮೀನುಗಳಲ್ಲಿ ಹೊಂದಿರುವ ಕೃಷಿಕರ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರವು ಒಂದು ಸೂಕ್ತವಾದ ಯೋಜನೆಯನ್ನು ರೂಪಿಸುವುದು. ಈ ನಿಟ್ಟಿನಲ್ಲಿ ಸರ್ಕಾರಿ ಸ್ವಾಮ್ಯ ಸಂಸ್ಥೆಗಳು, ರೈತ ಸಂಘಟನೆಗಳು:ಸಹಕಾರಿ ಸಂಸ್ಥೆಗಳು, ಉದ್ಯಮಿಗಳ ಪರಿಗಣನೆಗೆ ಯಾದಿಯನ್ನು ತಯಾರಿಸಲಾಗುವುದು;

8. ವಿಶಾಲವಾದ ಮತ್ತು ಬೃಹತ್ ನಿಕ್ಷೇಪಗಳಲ್ಲಿ, ವೈಜ್ಞಾನಿಕ ಗಣಿಗಾರಿಕೆಗೆ ಮತ್ತು ಪೂರ್ಣವಾಗಿ ನಿಕ್ಷೇಪ ಉಪಯೋಗವಾಗುವಂತೆ, ಕನಿಷ್ಠ ಗಣಿಗುತ್ತಿಗೆ ಪ್ರದೇಶವನ್ನು ನಿಯಮಗಳ ಚೌಕಟ್ಟಿನಡಿಯಲ್ಲಿ ನಿಗದಿಪಡಿಸಲಾಗುವುದು;

9. ಗಣಿ ಕಾರ್ಮಿಕರ ಉತ್ತಮ ಜೀವನ ಮಟ್ಟಕ್ಕಾಗಿ ಮತ್ತು ಅವರ ಕುಟುಂಬಗಳ ಕ್ಷೇಮಕ್ಕಾಗಿ, ಕಾನೂನಿನ ಪಕಾರ ನೀಡಬೇಕಾದ ಕನಿಷ್ಠ ವೇತನ ಮತ್ತು ಇತರ ಸೌಲಭ್ಯಗಳು ದೊರಕುವಂತೆ ಕ್ರಮ ಜರುಗಿಸಲಾಗುವುದು. ಅವರ ಕಾರ್ಯಕ್ಷೇತ್ರದ ಹತ್ತಿರವಿರುವ ಪಟ್ಟಣಗಳಲ್ಲಿ ಆರೋಗ್ಯ, ಶಿಕ್ಷಣ, ಮನರಂಜನೆ ಮತ್ತು ಇತರೇ ಉಪಯುಕ್ತತೆಗಳನ್ನು ಅಭಿವೃದ್ಧಿಪಡಿಸಲಾಗುವುದು;

10. ರಾಜ್ಯದಲ್ಲಿ ಗಣಿ ಕ್ಷೇತ್ರಕ್ಕೆ ಸಂಬಂಧಿಸಿದ ಮಾಹಿತಿಗಳಾದ ಸಂಪನ್ಮೂಲ, ಗಣಿ ಗಾರಿಕೆಗಾಗಿ ನೀಡಿರುವ ಪರವಾನಗಿಗಳ ವಿವರ, ಉತ್ಪಾದನೆಮಟ್ಟ, ರಫ್ತು, ಸ್ಥಳೀಯ ಬಳಕೆ, ಮೌಲ್ಯವರ್ಧನೆ, ಇತ್ಯಾದಿ ಮಾಹಿತಿಗಳನ್ನು ಕ್ರಮಬದ್ಧವಾಗಿ ದಾಖಲಿಸಿ, ಉದ್ದಿಮೆದಾರರಿಗೆ ಮಾಹಿತಿ ತಂತ್ರಜ್ಞಾನ ಮುಖೇನ ಲಭ್ಯವಾಗುವಂತೆ ಮಾಡಲಾಗುವುದು;

11. ಗಣಿಗಾರಿಕೆಯಿಂದ ಸಂಗ್ರಹಿಸಲಾದ ರಾಜಧನವನ್ನು ಗಣಿಗಾರಿಕೆ ಪ್ರದೇಶ:ಜಿಲ್ಲೆಗಳ ಅಭಿವೃದ್ಧಿಗೆ ಒದಗಿಸುವುದು;

12. ಖನಿಜ ವ್ಯಾಪಾರ ಮತ್ತು ಸ್ಟಾಕ್‌ಯಾರ್ಡ್‌ಗಳ ಪರವಾನಗಿ ಮತ್ತು ನಿಯಂತ್ರಣಕ್ಕಾಗಿ ನಿಯಮಾವಳಿಗಳನ್ನು ರೂಪಿಸುವುದು ಮತ್ತು ಅವರುಗಳು ಕಾಯ್ದೆ ಮತ್ತು ನಿಯಮಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು;

13. ರಾಜ್ಯದಲ್ಲಿ ಖನಿಜ ನಿಕ್ಷೇಪಗಳ ಅನ್ವೇಷಣೆಯೊಂದಿಗೆ ಕರಾವಳಿ ತೀರದ ಖನಿಜ ನಿಕ್ಷೇಪದ ಮತ್ತು ಸಮುದ್ರ ತಳದ ನಿಕ್ಷೇಪದ ಸಂಶೋಧನೆ ನಡೆಸುವುದು;

14. ಉಪಖನಿಜಗಳ ಆಡಳಿತ ನಿರ್ವಹಣೆಯನ್ನು ಪರಿಶೀಲಿಸುವುದು ಮತ್ತು ಕಾರ್ಯ ವಿಧಾನದಲ್ಲಿ ಏಕರೂಪತೆ ತರುವುದು;

15. ಉದ್ದಿಮೆಗಳು ಕಾರ್ಪೋರೇಟ್ ವಲಯಗಳ ಸಾಮಾಜಿಕ ಜವಾಬ್ದಾರಿಯನ್ನು (ಸಿ.ಎಸ್.ಆರ್.) ಪಾಲಿಸುವಂತೆ ಉತ್ತೇಜಿಸುವುದು.

## 6. ಖನಿಜಾಧಾರಿತ ಕೈಗಾರಿಕೆಗಳು:–

6.1: ಗಣಿಗಾರಿಕೆಯಿಂದ ಹೆಚ್ಚಿನ ಉದ್ಯೋಗಾವಕಾಶಗಳು ಸೃಷ್ಠಿಯಾಗುವುದರಿಂದ, ಗಣಿಗಾರಿಕೆಯನ್ನು ಒಂದು ಉದ್ಯಮವಾಗಿ ಉತ್ತೇಜಿಸುವ ಅವಶ್ಯಕತೆಯಿದೆ. ಇದು ಸಂಪನ್ಮೂಲವನ್ನು ಸಂಪತ್ತಾಗಿ ಪರಿವರ್ತಿಸಿ ಮೌಲ್ಯವನ್ನು ಸೃಷ್ಠಿಸುತ್ತದೆ.

6.2: ಲಭ್ಯವಿರುವ ಕಚ್ಚಾವಸ್ತುಗಳ ಸಂಪನ್ಮೂಲಕ್ಕೆ ಸಮನಾಗಿ ಹೊಸ ಖನಿಜಾಧಾರಿತ ಕೈಗಾರಿಕೆಗಳನ್ನು ಸ್ಥಾಪಿಸುವುದು.

6.3: ಕಾರ್ಯನಿರತ ಮತ್ತು ಹೊಸ ಕೈಗಾರಿಕೆಗಳು ಕಚ್ಚಾ ಖನಿಜ ವಸ್ತುಗಳನ್ನು ಪರಿಶೋಧಿಸುವ, ಪರಿಷ್ಕರಿಸುವ, ಸಿಂಟರಿಂಗ್ ಮತ್ತು ಪೆಲೆಟೈಸೇಷನ್ ಘಟಕ ಗಳನ್ನು ಸ್ಥಾಪಿಸಬೇಕು.

6.4: ಈ ಕೈಗಾರಿಕೆಗಳು ಹೆಚ್ಚು ಉದ್ಯೋಗಾವಕಾಶಗಳನ್ನು ಕಲ್ಪಿಸುವುದಲ್ಲದೆ, ಪೂರಕ ಕೈಗಾರಿಕೆಗಳು ಸೃಷ್ಠಿಯಾಗುವುದು.

## 7. ಸಮೀಕ್ಷೆ ಮತ್ತು ಪರಿಶೋಧನೆ:–

7.1: ರಾಜ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆ ಮತ್ತು ಭಾರತೀಯ ಭೂವಿಜ್ಞಾನ ಸಮೀಕ್ಷೆ ಇಲಾಖೆಗಳು, ರಾಜ್ಯದಲ್ಲಿ ಕಂಡುಬರುವ ಖನಿಜಗಳ ಸಮೀಕ್ಷೆ ಮತ್ತು ಪರಿಶೋಧನೆಯನ್ನು ಕೈಗೊಳ್ಳುವ ಎರಡು ಪ್ರಮುಖ ಏಜೆನ್ಸಿಗಳಾಗಿವೆ. ಹೊಸ ಖನಿಜ ನಿಕ್ಷೇಪಗಳನ್ನು ಪತ್ತೆಹಚ್ಚಲು ಈ ಕಾರ್ಯಚಟುವಟಿಕೆಗಳನ್ನು ಅತ್ಯಾಧುನಿಕ ತಂತ್ರಜ್ಞಾನ ಬಳಸಿ ಮತ್ತಷ್ಟು ಮುಂದುವರೆಸಿ ಬಲಪಡಿಸಬೇಕಾಗಿದೆ. ಈ ತಂತ್ರಜ್ಞಾನವನ್ನು ಹೊಂದಿರುವ ಖಾಸಗಿ ಉದ್ದಿಮೆದಾರರಿಗೆ ಹೊಸ ಖನಿಜ ನಿಕ್ಷೇಪಗಳನ್ನು ತ್ವರಿತವಾಗಿ ಪತ್ತೆಹಚ್ಚಲು ಪ್ರೋತ್ಸಾಹಿಸಲಾಗುವುದು.

7.2: ಕರ್ನಾಟಕವು 320 ಕಿ.ಮೀ. ತೀರ ಪ್ರದೇಶವನ್ನು ಹೊಂದಿರುವುದರಿಂದ, ತೀರ ಪ್ರದೇಶದ ಖನಿಜಾನ್ವೇಷಣೆ ಜೊತೆಗೆ ಸಮುದ್ರ ತಳದಿಂದ ವಿಶಿಷ್ಠ ಆರ್ಥಿಕ ವಲಯದವರೆಗೆ ಅನ್ವೇಷಣೆ ಕೈಗೊಳ್ಳಬೇಕಿದೆ. ಈ ಕಾರ್ಯಕ್ಕಾಗಿ ರಾಜ್ಯವು
ಭೂವಿಜ್ಞಾನ ಮಂತ್ರಾಲಯ ಮತ್ತು ಭಾರತೀಯ ಭೂವಿಜ್ಞಾನ ಸಂಸ್ಥೆಗಳ ಜೊತೆ ಸಹಕರಿಸುವುದು.

7.3: ಚಿನ್ನ, ಮೂಲ ಲೋಹಗಳು, ಪ್ಲಾಟಿನಂ ಗುಂಪಿನ ಖನಿಜಗಳು, ಇಲ್ಮನೈಟ್, ವಜ್ರ ಹಾಗೂ ಕಡಿಮೆ ದರ್ಜೆ ಕಬ್ಬಿಣದ ಅದಿರಿನ ನಿಕ್ಷೇಪಗಳನ್ನು ಅನ್ವೇಷಣೆ ಮಾಡಲು ವಿಶೇಷ ಆಸ್ತೆ ನೀಡಲಾಗುವುದು.

7.4: ರಾಜ್ಯಕ್ಕೆ ಗರಿಷ್ಠ ಮಟ್ಟದಲ್ಲಿ ಉಪಯೋಗವಾಗುವಂತಹ ಯೋಜನೆಗಳು ಹಾಗೂ ಕಾರ್ಯಕ್ರಮಗಳನ್ನು ಸ್ಟೇಟ್ ಜಿಯಾಲಜಿಕಲ್ ಪ್ರೋಗ್ರಾಮಿಂಗ್ ಬೋರ್ಡ್‌ನಲ್ಲಿ ರೂಪಿಸಲು ಆದ್ಯತೆ ನೀಡಲಾಗುವುದು.

## 8. ವೈಜ್ಞಾನಿಕ ಮತ್ತು ವ್ಯವಸ್ಥಿತ ಗಣಿಗಾರಿಕೆ:–

8.1: ಅಮೂಲ್ಯವಾದ ಸ್ವಾಭಾವಿಕ ಸಂಪನ್ಮೂಲಗಳು ನಿಷ್ಪ್ರಯೋಜಕವಾಗದ ಹಾಗೆ ವ್ಯವಸ್ಥಿತ ಮತ್ತು ವೈಜ್ಞಾನಿಕ ಗಣಿಗಾರಿಕೆಯನ್ನು ಕಾರ್ಯರೂಪಕ್ಕೆ ತರಲು ಇದು ಸಕಾಲ. ರಾಜ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್(ಐಬಿಎಂ) ಮತ್ತು ಗಣಿ ರಕ್ಷಣಾ ಇಲಾಖೆಗಳು, ವ್ಯವಸ್ಥಿತ ಮತ್ತು ವೈಜ್ಞಾನಿಕ ಗಣಿಗಾರಿಕೆಯನ್ನು ಜಾರಿಗೊಳಿಸುವ ಪ್ರಾಧಿಕಾರಗಳಾಗಿವೆ. ವೈಜ್ಞಾನಿಕವಾಗಿ ಮತ್ತು ಖನಿಜಗಳನ್ನು ವ್ಯರ್ಥವಾಗದಂತೆ ಸಂಪೂರ್ಣವಾಗಿ ಬಳಸಿಕೊಳ್ಳುವ ಗಣಿಗಾರಿಕೆಯ ಉದ್ದೇಶಗಳನ್ನು ಈಡೇರಿಸಲು ಈ ಇಲಾಖೆಗಳ ನಡುವೆ ಉತ್ತಮ ಸಮನ್ವಯವನ್ನು ಸಾಧಿಸಲು ಸಂಘಟಿತ ಪ್ರಯತ್ನಗಳನ್ನು ಕೈಗೆತ್ತಿಕೊಳ್ಳಲಾಗುವುದು.

8.2: ಖಾಸಗಿ ಉದ್ದಿಮೆಗಳ ಜೊತೆ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು, ನಿಕ್ಷೇಪವಿದ್ದು ಮುಚ್ಚಿರುವ ಗಣಿಗಳನ್ನು ಪುನ: ಪ್ರಾರಂಭಿಸುವ ಸಾಧ್ಯತೆಯನ್ನು ಪರಿಶೀಲಿಸಲಾಗುವುದು.

## 9. ಗಣಿಗಾರಿಕೆ ಮತ್ತು ಪರಿಸರ:–

9.1: ಖನಿಜ ಸಂಪನ್ಮೂಲಗಳ ಸಹನಶೀಲ ಬೆಳವಣಿಗೆಗೆ ಖನಿಜ ಪ್ರದೇಶಗಳ ಬಳಕೆ ಯನ್ನು ಅರಣ್ಯ, ಪರಿಸರ ಮತ್ತು ಜೈವಿಕ ವೈವಿಧ್ಯವನ್ನು ಸಂರಕ್ಷಿಸುವುದ ರೊಂದಿಗೆ, ಅಭಿವೃದ್ಧಿಯ ಅವಶ್ಯಕತೆಗಳ ತುಲನಾತ್ಮಕ ದೃಷ್ಟಿಕೋನದಡಿಯಲ್ಲಿ ನಿರ್ವಹಿಸಲಾಗುವುದು. ಗಣಿಗುತ್ತಿಗೆದಾರರು ಪರಿಸರ ಸಂಬಂಧಿ ಕಾನೂನುಗಳನ್ನು ಪಾಲಿಸುವಂತೆ ಅರಣ್ಯ, ಜೈವಿಕ ಸಂರಕ್ಷಣೆ ಮತ್ತು ಪರಿಸರ ಇಲಾಖೆ ಮೂಲಕ ನೋಡಿಕೊಳ್ಳಲಾಗುವುದು.

9.2: ಗಣಿಗಾರಿಕೆಯಿಂದ ಬರುವ ತ್ಯಾಜ್ಯಗಳನ್ನು ಉಪಯುಕ್ತತೆಗೆ ತರಲು ಪ್ರಯತ್ನಿಸ ಲಾಗುವುದು. ಪರಿಸರದ ಮೇಲಾಗುವ ಹಾನಿಯನ್ನು ಕಡಿಮೆ ಮಾಡಲು ಶೂನ್ಯ ತ್ಯಾಜ್ಯ ಗಣಿಗಾರಿಕೆಯನ್ನು ಉತ್ತೇಜಿಸಲಾಗುವುದು.

9.3: ಪಶ್ಚಿಮಘಟ್ಟಗಳು ಅಪರೂಪದ ಜೀವಪ್ರಭೇಧಗಳನ್ನು ಹೊಂದಿದ, ದಟ್ಟವಾದ ನಿತ್ಯ ಹರಿದ್ವರ್ಣ ಕಾಡನ್ನು ಹೊಂದಿವೆ. ಈ ಪ್ರದೇಶವು ಜೀವಿ ಪರಿಸರ ದೃಷ್ಠಿಯಿಂದ ಸೂಕ್ಷ್ಮ ಪ್ರದೇಶವಾಗಿದೆ. ರಾಜ್ಯದ ಮಳೆಯ ರೀತಿಯ ಮೇಲೆ ಪಶ್ಚಿಮಘಟ್ಟಗಳು ಪ್ರಭಾವ ಬೀರುತ್ತವೆ. ಆದರೆ, ಮುಂದಿನ ದಿನಗಳಲ್ಲಿ ಅರಣ್ಯ ಪ್ರದೇಶದಲ್ಲಿ ಕಡಿಮೆ ಧಕ್ಕೆಯಾಗುವಂತೆ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿ, ಖನಿಜವನ್ನು ಹೊರತೆಗೆಯುವ ಸಾಧ್ಯತೆ ಇರುವುದರಿಂದ, ಕಾಡಿನ ಜೀವಿ ಪರಿಸರಕ್ಕೆ ಯಾವುದೇ ತೊಂದರೆಯಾಗದಂತೆ ಖನಿಜ ಸಂಪನ್ಮೂಲಗಳ ಸಮೀಕ್ಷೆಗೆ ಹಾಗೂ ಪರಿಶೋಧನೆಗೆ ಅವಕಾಶ ನೀಡಲಾಗುವುದು.

9.4: ಪಶ್ಚಿಮಘಟ್ಟದಲ್ಲಿ ಸಂರಕ್ಷಿಸಬೇಕಾದ ದಟ್ಟ ಗಿಡಮರಗಳಿರುವ ಪ್ರದೇಶಗಳನ್ನು ಅರಣ್ಯ ಇಲಾಖೆಯವರು ಸ್ಪಷ್ಟವಾಗಿ ಗುರುತು ಮಾಡಿ, ಆ ಪ್ರದೇಶವನ್ನು ಜೀವಿ ಪರಿಸರ ದೃಷ್ಠಿಯಿಂದ ಸೂಕ್ಷ್ಮ ಪ್ರದೇಶವೆಂದು ಘೋಷಿಸಲಾಗುವುದು.

## 10. ಮೂಲಭೂತ ಸೌಕರ್ಯಗಳ ಅಭಿವೃದ್ಧಿ:–

10.1: ಖನಿಜಗಳನ್ನು ತೆಗೆಯುವುದು ಮತ್ತು ಬಳಸುವುದನ್ನು ಸುಸ್ಥಿರವಾಗಿ ನಿರ್ವಹಿಸಿ ಅಭಿವೃದ್ಧಿಪಡಿಸಲು ಹಾಗೂ ಖನಿಜಾಧಾರಿತ ಕೈಗಾರಿಕೆಗಳನ್ನು ಉತ್ತೇಜಿಸಲು, ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಅಗತ್ಯವಾಗಿದೆ. ಗಣಿ ಪ್ರದೇಶದಲ್ಲಿ ಈಗಿರುವ ಮೂಲಭೂತ ಸೌಲಭ್ಯಗಳು ಸಮರ್ಪಕವಾಗಿಲ್ಲ. ಆದ್ದರಿಂದ, ಗಣಿ ಪ್ರದೇಶದ ರಸ್ತೆಗಳ ಮತ್ತು ರೈಲ್ವೇ ನಿಲ್ದಾಣ:ಬಂದರುಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡಲಾಗುವುದು.

10.2: ಗಣಿ ಪ್ರದೇಶದಿಂದ ಅದಿರನ್ನು ರೈಲ್ವೇ ಸೈಡಿಂಗ್:ಸಂಗ್ರಹಗಾರ ಪ್ರದೇಶಕ್ಕೆ ಕನ್ವೇಯರ್ ಬೆಲ್ಟ್, ರೋಪ್‌ವೇ ಮೂಲಕ ಮತ್ತು ಇದೇ ರೀತಿಯ ಇತರ ಸೌಲಭ್ಯಗಳನ್ನು ಬಳಸಿ ಸಾಗಿಸುವುದನ್ನು ಪ್ರೋತ್ಸಾಹಿಸಲಾಗುವುದು. ಇದರಿಂದ ಪಕ್ಕದ ಹಳ್ಳಿಗಳ ಪರಿಸರ ಮಾಲಿನ್ಯವಾಗುವುದು, ವಾಹನ ದಟ್ಟಣೆ, ರಸ್ತೆ ಹಾಳಾಗುವುದು ಮತ್ತು ಅಪಘಾತಗಳಾಗುವುದು, ಇವುಗಳನ್ನು ತಪ್ಪಿಸಬಹುದು. ಖನಿಜ ಸಾಗಾಣಿಕೆ ಮಾರ್ಗದಲ್ಲಿ ಬರುವ ಪಟ್ಟಣ ಮತ್ತು ಗ್ರಾಮಗಳಿಗೆ ಪರ್ಯಾಯ ರಸ್ತೆಗಳನ್ನು ಗುರುತಿಸಿ ಪಿ.ಪಿ.ಪಿ. ಆಧಾರದಲ್ಲಿ ರಚಿಸಿ ಅಭಿವೃದ್ಧಿ ಪಡಿಸಲಾಗುವುದು.

10.3: ಗಣಿ ಪ್ರದೇಶದ ಸುತ್ತಮುತ್ತಲಿನ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸಲು ರಾಜ್ಯ ಸರ್ಕಾರಗಳಿಗೆ ಸಹಕಾರ ನೀಡುವುದಾಗಿ ಭಾರತ ಸರ್ಕಾರವು ರಾಷ್ಟ್ರೀಯ ಖನಿಜ ನೀತಿ, 2008ರಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಗಣಿ ಪ್ರದೇಶಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಜೆ.ಎನ್.ಎನ್.ಯು. ಆರ್.ಎಂ. ಮಾದರಿಯಲ್ಲಿ ಸಮಗ್ರ ಯೋಜನೆ ರೂಪಿಸಲು ಕೇಂದ್ರ ಸರ್ಕಾರವನ್ನು ಕೋರಲಾಗುವುದು.

10.4: ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಬಂದರು ಇಲಾಖೆಗಳ ಸಹಯೋಗದೊಂದಿಗೆ ಖನಿಜ ಮತ್ತು ಖನಿಜ ಉತ್ಪನ್ನಗಳನ್ನು ರಫ್ತು ಮಾಡಲು ಈಗಿರುವ ಬಂದರುಗಳ ಸಾಮರ್ಥ್ಯ ಹೆಚ್ಚಿಸಿ ಅಭಿವೃದ್ಧಿ ಪಡಿಸುವುದು ಮತ್ತು ಹೊಸ ಬಂದರುಗಳನ್ನು ನಿರ್ಮಾಣ ಮಾಡಲಾಗುವುದು.

## 11. ಮಾನವ ಸಂಪನ್ಮೂಲಗಳ ಅಭಿವೃದ್ಧಿ:–

11.1: ವೈಜ್ಞಾನಿಕ ರೀತಿಯಲ್ಲಿ ಗಣಿಗಳನ್ನು ಅಭಿವೃದ್ಧಿಪಡಿಸಲು ಬೇಕಾದ ಸಾಕಷ್ಟು ತರಬೇತಿ ಹೊಂದಿದ ಪರಿಣಿತರು ಎಲ್ಲಾ ಮಟ್ಟದಲ್ಲೂ ದೊರಕುವಂತೆ ಈಗಿರುವ ವಿದ್ಯಾಭ್ಯಾಸ ಮತ್ತು ತರಬೇತಿ ಸೌಲಭ್ಯಗಳನ್ನು ಸದಾಕಾಲ

ಪರಿಶೀಲಿಸಲಾಗುವುದು. ಈ ವಿಭಾಗದಲ್ಲಿ ಮಾನವ ಸಂಪನ್ಮೂಲದ ಬೇಡಿಕೆಯನ್ನು ಸಮಗ್ರವಾಗಿ ಪರಿಶೀಲಿಸಲಾಗುವುದು. ಈ ಅವಶ್ಯಕತೆಗಳನ್ನು ಪೂರೈಸಲು ಶಿಕ್ಷಣ ಸಂಸ್ಥೆಗಳನ್ನು ಮೇಲ್ದರ್ಜೆಗೇರಿಸಲಾಗುವುದು. ಗಣಿಗಾರಿಕೆ, ಇಂಜಿನಿಯರಿಂಗ್ ಮತ್ತು ಗಣಿ ಯಂತ್ರೋಪಕರಣಗಳ ಬಗ್ಗೆ ಹೆಸರಾಂತ ಖನಿಜ ಸಂಸ್ಥೆಗಳ ಸಹಯೋಗದೊಂದಿಗೆ ಖನಿಜ ಸಂಶೋಧನೆ ಸಂಸ್ಥೆಯನ್ನು ಸ್ಥಾಪಿಸಿ ಗಣಿ ಉದ್ಯಮಕ್ಕಾಗಿ, ಹಳ್ಳಿಗಳಲ್ಲಿರುವ ತರಬೇತಿ ಇಲ್ಲದ ಜನರಿಗೆ ತರಬೇತಿ ನೀಡಲಾಗುವುದು.

11.2: ಖನಿಜ ಸಂಪನ್ಮೂಲಗಳ ಪರಿಶೋಧನೆಗಾಗಿ ರಾಜ್ಯದ ಗಣಿ ಮತ್ತು ಭೂವಿಜ್ಞಾನ ಇಲಾಖೆಯನ್ನು ಬಲಪಡಿಸಲಾಗುವುದು. ಪರಿಶೋಧನೆಯ ಆಧುನಿಕ ತಂತ್ರಗಳು ಮತ್ತು ಖನಿಜ ನಿರ್ವಹಣೆ ಕುರಿತಂತೆ, ಇಲಾಖೆಯಲ್ಲಿನ ಸಿಬ್ಬಂದಿಗೆ ರಾಷ್ಟ್ರೀಯ ಸಂಸ್ಥೆಗಳಲ್ಲಿ ನಿರಂತರವಾಗಿ ತರಬೇತಿಯನ್ನು ನೀಡ ಲಾಗುವುದು. ಈ ನಿಟ್ಟಿನಲ್ಲಿ ಭಾರತ ಸರ್ಕಾರವು, ರಾಷ್ಟ್ರೀಯ ಖನಿಜ ನೀತಿಯಲ್ಲಿ ನಿರೂಪಿಸಿರುವಂತೆ ರಾಜ್ಯ ಸರ್ಕಾರವನ್ನು ಬೆಂಬಲಿಸುವುದು.

11.3: ಇತ್ತೀಚಿನ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಮತ್ತು ಕೈಗಾರಿಕೆಯ ಅಗತ್ಯತೆಗಳ ಬಗ್ಗೆ ತಿಳಿದುಕೊಳ್ಳಲು ಕೈಗಾರಿಕೆ ಮತ್ತು ಇಲಾಖೆಯ ನಡುವೆ ನಿಯತವಾಗಿ ಸಂವಾದವನ್ನು ಏರ್ಪಡಿಸಲಾಗುವುದು. ಅಗತ್ಯತೆಗಳನ್ನು ಪೂರೈಸಲು ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗುವುದು.

## 12. ಖನಿಜಾಡಳಿತ:–

12.1: ಗಣಿಗುತ್ತಿಗೆ ಪ್ರದೇಶದ ನಕ್ಷೆಯನ್ನು ಸರ್ವೇ ಆಫ್ ಇಂಡಿಯಾ ಟೋಪೋಶೀಟ್‌ಗಳ ಅಕ್ಷಾಂಶ ಮತ್ತು ರೇಖಾಂಶಗಳಿಗೆ ಪರಿವರ್ತಿಸುವುದು.

12.2: ಎಲ್ಲಾ ಭೂಪಟಗಳನ್ನು ಡಿಜಿಟೈಜ್ ಮಾಡುವುದು.

12.3: ಖನಿಜಗಳ ಸಾಗಾಣಿಕೆಯನ್ನು ಸುರಕ್ಷಿತ ಅಂಶಗಳನ್ನು ದಾಖಲಿಸಲಾದ ಇ–ಪರ್ಮಿಟ್ ಮೂಲಕ ಸಾಗಿಸುವುದನ್ನು ಜಾರಿಗೊಳಿಸಲಾಗುವುದು.

12.4: ನಿರ್ದಿಷ್ಟ ಉಪಖನಿಜಗಳ ಅರ್ಜಿಗಳ ತ್ವರಿತ ವಿಲೇವಾರಿಗಾಗಿ ಗ್ರಾನೈಟ್ ಸಂರಕ್ಷಣೆ ಮತ್ತು ಅಭಿವೃದ್ಧಿ ನಿಯಮಾವಳಿ, 1999ರನ್ವಯ ಏಕರೂಪ ವಿಧಾನಗಳನ್ನು ರೂಪಿಸಲಾಗುವುದು.

12.5: ಗ್ರಾಮ ಪಂಚಾಯಿತಿಗಳು ತಮ್ಮ ವ್ಯಾಪ್ತಿಯ ಪ್ರದೇಶದಲ್ಲಿನ ಹಳ್ಳಿಗಳ ಪಾತ್ರದಲ್ಲಿ ಸಾಧಾರಣ ಮರಳು ಗಣಿಗಾರಿಕೆ ಬಗ್ಗೆ ನಿಗಾ ವಹಿಸುವುದು. ಗ್ರಾನೈಟ್:ಮರಳು ಶಿಲೆಗಳಿಂದ ಮರಳು ಸಂಸ್ಕರಿಸುವ ಘಟಕಗಳ ಸ್ಥಾಪನೆಗೆ ಪ್ರೋತ್ಸಾಹ ಮತ್ತು ಸೌಲಭ್ಯಗಳನ್ನು ಒದಗಿಸಲಾಗುವುದು.

## 13. ಖನಿಜ ವ್ಯಾಪಾರ:–

13.1: ಖನಿಜ ರಿಯಾಯಿತಿ ನಿಯಮಾವಳಿ, 1960ರ ನಿಯಮ 64(ಸಿ) ರನ್ವಯ ಗುತ್ತಿಗೆದಾರರು ಗಣಿಯಿಂದ ತಿರಸ್ಕೃತ ಅಥವಾ ವ್ಯಾಪಾರ ಮಾಡಿದ ರಾಶಿಗಳಿಗೆ ಮತ್ತು ಸಂಸ್ಕರಿಸಿ ಉಪಯೋಗಿಸಲು ಸಾಗಾಣಿಕೆ ಮಾಡಿದಲ್ಲಿ, ರಾಜಧನ ಪಾವತಿಸಬೇಕಾಗುತ್ತದೆ. ಆದ್ದರಿಂದ, ವ್ಯಾಪಾರಿಗಳಿಂದ ಮಾರಾಟ ಬೆಲೆಗೆ ಅನುಗುಣವಾಗಿ ತೆರಿಗೆಯನ್ನು ಸಂಗ್ರಹಿಸಲು **"ಕರ್ನಾಟಕ ಖನಿಜ ವ್ಯಾಪಾರ ನಿಯಮಗಳು"** ಅನ್ನು ರಚಿಸಲು ಪ್ರಸ್ತಾಪಿಸಲಾಗಿದೆ.

## 14. ಕಾನೂನುಬಾಹಿರ ಖನಿಜಗಳ ಗಣಿಗಾರಿಕೆ, ಸಾಗಣೆ ಮತ್ತು ಸಂಗ್ರಹಣೆ:–

14.1: ಕಾನೂನುಬಾಹಿರ ಗಣಿಗಾರಿಕೆ, ಖನಿಜಗಳ ಸಾಗಣೆ ಮತ್ತು ಸಂಗಹಣೆಯನ್ನು ನಿಯಂತ್ರಿಸಲು ನಿಯಮಾವಳಿಗಳನ್ನು ರೂಪಿಸಲು ಎಂ.ಎಂ.(ಡಿ&ಆರ್) ಕಾಯ್ದೆ, 1957ರ 23(ಸಿ) ಪ್ರಕರಣದ ಅಡಿಯಲ್ಲಿ, ರಾಜ್ಯಗಳಿಗೆ ಅಧಿಕಾರ ನೀಡಲಾಗಿದೆ. ಉಪಬಂಧಗಳಿಗನುಸಾರವಾಗಿ ರಾಜ್ಯವು ನಿಯಮ ಗಳನ್ನು ರಚಿಸಿದೆ. ಕಾನೂನುಬಾಹಿರ ಗಣಿಗುತ್ತಿಗೆದಾರರ ವಿರುದ್ಧ ಕಠಿಣ ಕ್ರಮ ತೆಗೆದುಕೊಳ್ಳಲಾಗುವುದು. ಅಧಿಕೃತ ದಾಖಲೆಗಳಿಲ್ಲದೆ ಸಾಗಣೆ ಅಥವಾ ಸಂಗ್ರಹಣೆ ಮಾಡಿದ ಖನಿಜಗಳನ್ನು ರಾಜ್ಯಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಜಿಲ್ಲಾ ಕಾರ್ಯಪಡೆಗೆ ಮತ್ತು ಜಿಲ್ಲಾ ಅಧಿಕಾರಿ ಗಳಿಗೆ ಹೆಚ್ಚಿನ ಅಧಿಕಾರವನ್ನು ಪ್ರತ್ಯಾಯೋಜಿಸಲಾಗುವುದು.

14.2: ಗಣಿ ಮತ್ತು ಭೂವಿಜ್ಞಾನ ಇಲಾಖೆ, ಅರಣ್ಯ ಇಲಾಖೆ, ಕಂದಾಯ ಇಲಾಖೆ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್ ಹಾಗೂ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧಿಕಾರಿಗಳ ಜಂಟಿ ಕಾರ್ಯಪಡೆ ರಚಿಸಿ, ವಾರ್ಷಿಕವಾಗಿ, ಒಮ್ಮೆ ಜಂಟಿಯಾಗಿ ಸಮಗ್ರ ತಪಾಸಣೆ ನಡೆಸಿ, ಗುತ್ತಿಗೆ ಪ್ರದೇಶಗಳಲ್ಲಿಯ ಒತ್ತುವರಿಯನ್ನು ಗುರುತಿಸುವ ಒಂದು ಹೊಸ ಆಯಾಮಕ್ಕೆ ಚಾಲನೆ ಕೊಡಲಾಗುವುದು.

14.3: ಕ್ವಿಕ್ ಬರ್ಡ್ ಉಪಗ್ರಹ ಮಾಹಿತಿಯನ್ನು ಉಪಯೋಗಿಸಿ ಗಣಿ ಪ್ರದೇಶಗಳ ಒತ್ತುವರಿಗಳನ್ನು ಗುರುತಿಸಲಾಗುವುದು. ಇನ್ನು ಮುಂದೆ ಗಣಿ ಪ್ರದೇಶದ ನಿಖರತೆಯನ್ನು ಖಚಿತಪಡಿಸಿಕೊಳ್ಳಲು ಅಕ್ಷಾಂಶ ಮತ್ತು ರೇಖಾಂಶಗಳನ್ನು ಹೊಂದಿರುವ ಗ್ರಿಡ್ ಆಧಾರಿತ ನಕ್ಷೆಗಳನ್ನು ಹೊಸ ಗುತ್ತಿಗೆ:ನವೀಕರಣಕ್ಕೆ ಬರುವ ಅರ್ಜಿಗಳ ಜೊತೆ ಕಡ್ಡಾಯಗೊಳಿಸಲಾಗುವುದು. ಖನಿಜ ತನಿಖಾ ಠಾಣೆಗಳನ್ನು ಸುಸಜ್ಜಿತ ಯಂತ್ರೋಪಕರಣಗಳಿಂದ ಆಧುನೀಕರಿಸಿ ಅನಧಿಕೃತ ಸಾಗಾಣಿಕೆಯನ್ನು ಗುರುತಿಸಲಾಗುವುದು. ಅಕ್ರಮ ಗಣಿಗಾರಿಕೆ, ಸಾಗಾಣಿಕೆ ಮತ್ತು ಖನಿಜ ಸಂಗ್ರಹಣೆಯನ್ನು ತಡೆಗಟ್ಟಲು ಸಂಚಾರಿ ತನಿಖಾ ದಳಗಳನ್ನು ರಚಿಸಲಾಗುವುದು.

14.4: ತಪ್ಪಿತಸ್ಥರನ್ನು ವಿವಿಧ ಕಾಯ್ದೆ ಮತ್ತು ನಿಯಮಗಳಡಿಯಲ್ಲಿ ವಿಚಾರಣೆಗೆ ಒಳಪಡಿಸಲಾಗುವುದು. ಅಪರಾಧಕ್ಕೆ ಉಪಯೋಗಿಸಿದ ಉಪಕರಣ ಮತ್ತು ವಾಹನಗಳನ್ನು ವಶಪಡಿಸಿಕೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಲಾಗುವುದು. ತಪ್ಪಿತಸ್ಥರನ್ನು ಯಾವುದೇ ಹೊಸ ಗಣಿ ಮಂಜೂರಾತಿ ಅಥವಾ ನವೀಕರಣಗಳಲ್ಲಿ ಪರಿಗಣಿಸಲಾಗುವುದಿಲ್ಲ ಮತ್ತು ಯಾವುದೇ ಅನುಮತಿಗಳು ಮತ್ತು ರಿಯಾಯಿತಿಗಳನ್ನು ಪಡೆಯಲು ಅನರ್ಹ ಗೊಳಿಸಲಾಗುವುದು.

## 15. ನೀತಿಯ ಅನುಷ್ಠಾನ:–

15.1: ಕರ್ನಾಟಕ ರಾಜ್ಯ ಖನಿಜ ನೀತಿಯ ಅನುಷ್ಠಾನದ ಮೇಲ್ವಿಚಾರಣೆಯನ್ನು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿತಿಯು ನೋಡಿಕೊಳ್ಳುವುದು. ಈ ಸಮಿತಿಯಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಅರಣ್ಯ, ಕಂದಾಯ, ಲೋಕೋಪಯೋಗಿ, ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್, ಜಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ, ಮೈನ್ಸ್ ಸೇಫ್ಟಿ ನಿರ್ದೇಶನಾಲಯ, ಗಣಿ ಉದ್ದಿಮೆಯ ಮತ್ತು ಇದೇ ರೀತಿಯ ಸಂಸ್ಥೆಗಳ ಪ್ರತಿನಿಧಿಗಳು ಸದಸ್ಯರಾಗಿರುತ್ತಾರೆ. ಇದಲ್ಲದೆ, ಎರಡು ಅಥವಾ ಮೂರು ಮಂದಿ ವಿಶೇಷ ಪರಿಣತಿ ಹೊಂದಿದ ತಜ್ಞರನ್ನು ಈ ಸಮಿತಿಯ ಸಹ ಸದಸ್ಯರನ್ನಾಗಿ ತೆಗೆದುಕೊಳ್ಳಬಹುದಾಗಿದೆ. ಈ ಸಮಿತಿಯು 6 ತಿಂಗಳಿಗೊಮ್ಮೆಯಾದರೂ ಸಭೆ ಸೇರಬೇಕು. ಗಣಿ ಸಚಿವರು ವರ್ಷಕ್ಕೊಮ್ಮೆ ನೀತಿಯ ಅನುಷ್ಠಾನವನ್ನು ಪರಿಶೀಲಿಸುತ್ತಾರೆ.

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅನುಬಂಧ – I**

| ಕ್ರಮ ಸಂಖ್ಯೆ | ಖನಿಜದ ಹೆಸರು | ಒಟ್ಟು ಗುತ್ತಿಗೆಗಳ ಸಂಖ್ಯೆ | 2006–07ರಲ್ಲಿ ಮಾಡಲಾದ ಉತ್ಪಾದನೆ (ಮೆಟ್ರಿಕ್ ಟನ್ನುಗಳಲ್ಲಿ) |
|---|---|---|---|
| 1. | ಕಬ್ಬಿಣದ ಅದಿರು | 178 | 4,16,72,254 |
| 2. | ಮ್ಯಾಂಗನೀಸ್ | 37 | 1,82,064 |
| 3. | ಸೋಪ್ ಸ್ಟೋನ್ | 5 | 690 |
| 4. | ಎರಕದ ಮರಳು | 39 | 1,00,220 |
| 5. | ಸುಣ್ಣದ ಕಲ್ಲು/ಡೊಲೋಮೈಟ್ | 157 | 1,47,45,413 |
| 6. | ಕ್ವಾರ್ಟ್‌ಜೈಟ್ | 5 | – |
| 7. | ಅಲ್ಯೂಮಿನಿಯಂ ಲ್ಯಾಟರೈಟ್ | 6 | 1,75,748 |
| 8. | ಜೇಡಿಮಣ್ಣು | 14 | 30,603 |
| 9. | ಬಾಕ್ಸೈಟ್ | 4 | 1,15,797 |
| 10. | ಗ್ರಾಫೈಟ್ | 6 | 1,997 |

| | | | |
|---|---|---|---|
| 11. | ವರ್ಮಿಕ್ಯೂಲೈಟ್ | 2 | – |
| 12. | ಕಯನೈಟ್ | 6 | 2,264 |
| 13. | ಫೆಲ್ಸೈಟ್ | 13 | 972 |
| 14. | ಮ್ಯಾಗ್ನಸೈಟ್ | 11 | 11,720 |
| 15. | ರೂಬಿ ಕೊರಂಡಮ್ | 7 | 10 |
| 16. | ಚಿನ್ನ/ತಾಮ್ರ | 6 | 23,94,722 |
| 17. | ಸಿಲಿಕಾ ಮರಳು | 23 | 2,06,541 |
| 18. | ಲೈಮ್‌ಷೆಲ್ | 17 | 7,17,182 |
| 19. | ಕ್ವಾರ್ಟ್ಜ್ | 44 | 57,371 |
| | **ಒಟ್ಟು** | **580** | **5,80,20,86,995** |

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅನುಬಂಧ – II**

| ಕ್ರಮ ಸಂಖ್ಯೆ | ವಿವಿಧ ಬಗೆಯ ಗ್ರಾನೈಟ್‌ಗಳು | ಸಂಪತ್ತು (ಮಿಲಿಯನ್ ಕ್ಯೂಬಿಕ್ ಮೀಟರ್) | ಗಣಿಗುತ್ತಿಗೆಗಳ ಸಂಖ್ಯೆ |
|---|---|---|---|
| 1. | ಪಿಂಕ್ ಮಲ್ಟಿಕಲರ್ಡ್ ಗ್ರಾನೈಟ್ | 133 | 288 |
| 2. | ಪಿಂಕ್ ಗ್ರಾನೈಟ್ | 15 | 205 |
| 3. | ಗ್ರೇ ಗ್ರಾನೈಟ್ | 65 | 130 |
| 4. | ಬ್ಲಾಕ್ ಗ್ರಾನೈಟ್/ಗ್ರೀನ್ ಗ್ರಾನೈಟ್ | 7 | 186 |
| 5. | ಯೆಲ್ಲೋ ಗ್ರಾನೈಟ್ | 4 | 4 |
| 6. | ಕ್ವಾರ್ಡ್ಜೈಟ್/ಸ್ಯಾಂಡ್ ಸ್ಟೋನ್ | 574 | – |
| | **ಒಟ್ಟು** | **798** | **813** |

**ಸೂಚನೆ:–**

1. ಚಾಲ್ತಿಯಲ್ಲಿರುವ ಒಟ್ಟು ಗುತ್ತಿಗೆಗಳು : 535
2. 2006–07ನೇ ಸಾಲಿನಲ್ಲಿ ಒಟ್ಟು ಗ್ರಾನೈಟ್ ಉತ್ಪಾದನೆ : 1.9 ಲಕ್ಷ ಕ್ಯೂಬಿಕ್ ಮೀಟರ್.

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅನುಬಂಧ – III**

**ಷೆಡ್ಯೂಲ್ – ಒಂದು**

**ನಿರ್ದಿಷ್ಟಪಡಿಸಲಾದ ಖನಿಜಗಳು**

**ಭಾಗ "ಎ"**

**ಹೈಡ್ರೋ ಕಾರ್ಬನ್ಸ್ / ಎನರ್ಜಿ ಮಿನರಲ್ಸ್**

1. ಕಲ್ಲಿದ್ದಲು ಮತ್ತು ಲಿಗ್‌ನೈಟ್

**ಭಾಗ "ಬಿ"**

**ಅಣು (ಅಟಾಮಿಕ್) ಖನಿಜಗಳು**

1. ಬೆರಿಲ್ ಮತ್ತು ಇತರೆ ಬೆರಿಲಿಯಂ ಹೊಂದಿದ ಖನಿಜಗಳು
2. ಲೀತಿಯಂ ಹೊಂದಿದ ಖನಿಜಗಳು

3. ಯುರೇನಿಯಂ ಮತ್ತು ತೋರಿಯಂ ಹೊಂದಿದ "ರೇರ್ ಅರ್ಥ್" ಗುಂಪಿನ ಖನಿಜಗಳು
4. ನಿಯೋಬಿಯಂ ಹೊಂದಿದ ಖನಿಜಗಳು
5. ಯುರೇನಿಯಂ ಹೊಂದಿದ ಫಾಸ್‌ಫೋರೈಟ್ಸ್ ಮತ್ತು ಇತರೆ ಫಾಸ್ಪಾಟಿಕ್ ಖನಿಜಗಳು
6. ಪಿಚ್‌ಬ್ಲೆಂಡ್ ಮತ್ತು ಇತರೆ ಯುರೇನಿಯಂ ಖನಿಜಗಳು
7. ಟೈಟಾನಿಯಂ ಹೊಂದಿದ ಖನಿಜಗಳು ಮತ್ತು ಅದಿರುಗಳು (ಇಲ್ಮನೈಟ್, ರೂಟೈಲ್ ಮತ್ತು ಲಿಯೋಕಾಕ್ಸೀನ್)
8. ಟ್ಯಾಂಟಾಲಿಯಂ ಹೊಂದಿದ ಖನಿಜಗಳು
9. ಯುರೇನಿಯಂ ಹೊಂದಿದ ಅಲನೈಟ್, ಮಾನೋಜೈಟ್ ಮತ್ತು ಇತರೆ ತೋರಿಯಂ ಖನಿಜಗಳು
10. ತಾಮ, ಚಿನ್ನ, ಇಲ್ಮನೈಟ್ ಮತ್ತು ಇತರೆ ಟೈಟಾನಿಯಂ ಖನಿಜಗಳು ತೆಗೆದ ನಂತರ ಉಳಿದ ಯುರೇನಿಯಂ ಯುಕ್ತ ಟೇಲಿಂಗ್ಸ್
11. ಝಿರ್‌ಕಾನ್ ಸೇರಿ ಝಿರ್‌ಕೋನಿಯಂ ಯುಕ್ತ ಖನಿಜ ಮತ್ತು ಅದಿರುಗಳು.

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಭಾಗ "ಸಿ"**

1. ಕಲ್ನಾರು
2. ಬಾಕ್ಸೈಟ್
3. ಕ್ರೋಂ ಅದಿರು
4. ತಾಮ್ರದ ಅದಿರು
5. ಚಿನ್ನ
6. ಕಬ್ಬಿಣದ ಅದಿರು
7. ಸೀಸ
8. ಮ್ಯಾಂಗನೀಸ್ ಅದಿರು
9. ಪ್ರಶಸ್ತ ಶಿಲೆಗಳು
10. ಸತು (ಝಿಂಕ್)

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**PROCEEDINGS OF THE GOVERNMENT OF KARNATAKA**

**Sub : Publication of Karnataka Mineral Policy, 2008.**

**PREAMBLE:**

Minerals are important natural, finite and non-renewable valuable resources essential for mankind. "Minerals are the treasures of the State", therefore, systematic, scientific and sustainable harnessing of mineral wealth should be the cornerstone of development objectives of the state. The utilization of these minerals has to be guided by long-term goals and perspectives. As these goals and perspectives are dynamic and responsive to the economic scenario, the Karnataka mineral policy has to evolve. It is therefore necessary to revise the Karnataka Mineral Policy 2000. Accordingly, in this connection, opinion of different Organizations and NGOs connected with mining have been obtained and further, prominent features in the National Mineral Policy, 2008 have also been incorporated in Karnataka Mineral Policy, 2008. Accordingly, the Government has decided to publish Karnataka Mineral Policy, 2008, in place of Karnataka Mineral Policy, 2000.

**GOVERNMENT ORDER No. CI.221:MMM.2006, BANGALORE, DATED:10th December, 2008.**

In the circumstances explained in the preamble, the Government is pleased to publish Karnataka Mineral Policy, 2008 with immediate effect and until further orders as appended to this order, replacing Karnataka Mineral Policy, 2000.

By order and in the name of the Governor of Karnataka,

**V.UMESH**
Principal Secretary to Government
Commerce & Industries Department

# KARNATAKA MINERAL POLICY 2008

## 1. INTRODUCTION

Minerals are important natural, finite and non-renewable valuable resources essential for mankind. "Minerals are the treasures of the State", therefore, systematic, scientific and sustainable harnessing of mineral wealth should be the cornerstone of development objectives of the state. The utilization of these minerals has to be guided by long term goals and perspectives. As these goals and perspectives are dynamic and responsive to the economic scenario, the Karnataka mineral policy has to evolve. It is therefore necessary to revisit the Karnataka Mineral Policy 2000.

1.1 Karnataka is one of the mineral rich states in India, with an area of 1.92 lakh sq.km. covering 29 districts. The state has a vast and varied Geological setting right from Precambrian to recent formations, with 40,000 Sq. Kms of green stone belts endowed with valuable mineral resources like gold, silver, copper, iron, manganese, limestone, dolomite, chromite, magnesite and other useful rock formations like granite etc.

1.2 There is great potential for exploration with the state-of-the-art technology for gold, platinum, precious and semi-precious minerals. Similarly, there is immense potential in the state for exploration for refractory and ceramic minerals.

1.3 The state is having the distinction of adopting a progressive Industrial development programme and has announced the creation of steel and cement zones. To meet this need sustainable development of mineral based raw materials has become very critical.

## 2. PRESENT MINING ACTIVITY

2.1 The Kolar Gold Field was the earliest gold mine to be worked systematically but is now closed for economic and technical reasons. The Hutti Gold Mines in Raichur district is the only gold producing mine in the country now with an average annual production of about 2.8 tonnes.

2.2 The state has over 9,000 million tonnes of iron ore resources, the bulk of which is magnetite. The production during 2007-08 crossed 47 million tonnes. The production is mainly concentrated in Bellary/Hospet area with the balance from Chitradurga, Tumkur and Bagalkot districts. Most of the iron ore fines are exported as very few of the steel, sponge and pig iron plants have sintering and pelletisation plants.

2.3 Lime stone is another important mineral resource in the state with an estimated resource of 51,000 million tonnes spread across the districts of Gulbarga, Bagalkot, Belgaum, Chitradurga, Tumkur, Shimoga and Uttara Kannada. Present production of about 14 million tonnes sustains 10 existing cement plants in these districts. There is scope for establishing a few green field cement plants for optimum utilization of this mineral without sacrificing environmental concerns.

2.4 State is also producing minerals like Chromite, Kyanite, Dolomite, Magnesite, Bauxite, Felsite, Dunite, and Quartz. Mineralwise leases and production is given in Annexure-I.

2.5 Karnataka state is bestowed with vast resources of granite deposits. These granite deposits had brought Karnataka state into the international scenario. It is essential to bring back

the glory to the granite industry of Karnataka by way of initiatives in the current mineral policy. Total granite production for the year 2006-07 is 1.96 lakh cu.m. The granite varieties, resources and number of leases are given in Annexure -II.

## 3. REGULATION OF MINERALS

3.1 Management of mineral resources is governed by both the central and state governments in terms of Entry 54 of the Union List and Entry 23 of the state list of the seventh schedule of the constitution of India.

3.2 Mines and Minerals (Development and Regulation) Act. 1957 (MMDR Act) Mineral Concession Rules, 1960 (MCRs) and Mineral Conservation and Development Rules, 1988 (MCDRs) were enacted by Government of India for conservation and systematic development of minerals. These rules are applicable in respect of all minerals except fuel minerals, atomic minerals and minor minerals. Prior approval of the Government of India is essential for grant of mineral concession in respect of minerals specified in the first Schedule of MMDR Act. (Annexure-III).

3.3 Rule making powers in respect of minor minerals have been delegated to the States under Section 15 of the MMDR Act. In exercise of these powers, Karnataka Minor Mineral Concession Rules (KMMCRs), 1994 have been framed. Sec. 23(c) of MMDR Act 1957 empowers the States to frame rules for preventing illegal mining, transportation and storage of minerals. These rules have also been framed by the State Government.

3.4 The grant of Reconnaissance permit, Prospecting license or Mining Lease is governed by the MMDR Act, 1957 and MCRs, 1960. The state government with the prior approval of Government of India gives permission for prospecting or leasing of mine in respect of specified major minerals.

3.5 Licenses are given for both prospecting and exploration on first come first served basis. Reconnaissance permits to conduct aerial surveys over an extent up to 10000 sq. kms can be given to any person who is an Indian national or a company as defined in Sub section (I) of Section (3) of the Companies' Act 1956, provided that a single license shall not exceed 5000 sq kms. The Act and Rules provide for grant of Prospecting Licenses covering a total area of not more than 25 sq. kms. As per provisions of Act and Rules, a maximum of 10 sq.kms. is granted for a mining lease.

3.6 The mineral concession holders shall also comply with the relevant provisions of Forest (Conservation) Act, 1980, Environmental (Protection) Act, 1986, Water (Prevention & Control of Pollution) Act, 1974 & Air (Prevention & control of Pollution) Act, 1981.

## 4. NATIONAL MINERAL POLICY 2008

4.1 Government of India had liberalized the grant of licenses and leases for most of the minerals except atomic minerals and Hydrocarbon energy minerals under the National Mineral Policy, 1993.

4.2 The salient features of the National Mineral Policy 2008 are:

- To exploit geological potentials of the country on a scientific basis after due exploration and prospecting.
- The stress is on zero mining waste by employing latest technologies to extract minerals and metals from the ores.
- Development of a proper inventory of resources and reserves, a mining tenement registry, preparation of mineral atlas will be given priority.
- States Directorates of Mining & Geology will be strengthened with man power, equipment and skills.
- Mining is closely related to the forest and environment. A suitable framework will be designed to ensure mining along with suitable measures for restoration of the ecological balance.
- To promote and encourage scientific mining methods by employing advanced mining equipment and machineries with skilled and non skilled man power.
- Value addition will be actively encouraged. Value addition will go hand in hand with the growth of the mineral sector as a stand alone industrial activity.

- The minerals have to be conserved for the future generations.
- Suitable infra-structure facilities have to be created through public private participation.
- Small deposits have to be taken care of by amalgamating suitably so that there is no wastage of natural resources.
- Mining is high risk venture. Therefore suitable financial support system has to be created.
- Minerals will continue to be exported to earn foreign exchange.
- The closure of mines has to be systematically planned and land has to be restored to its original landscape.
- The revenues from minerals will be rationalized to ensure that the mineral bearing states get a fair share of the value of minerals extracted.
- States will be assisted to overcome the problem of illegal mining through operational and financial linkages with Indian Bureau of Mines.
- Research and development in minerals will receive prime importance and a comprehensive institutional framework for R&D and Training will be developed.

4.3 The National Mineral Policy, 2008 differs from the earlier policy by introducing an open sky policy on non-exclusivity for reconnaissance work, large area prospecting license, seamless transfer and security of tenure to the entrepreneurs. The MMDR Act, the MCRs and the MCDRs are being amended by Government of India in line with the policy in consultation with the states. This has necessitated changes in the policy and the legal regime regulating the growth and development of the mineral sector in Karnataka. Keeping in view the objectives of National Mineral Policy 2008, Government of Karnataka has come out with the Mineral Policy 2008.

**5. KARNATAKA STATE MINERAL POLICY 2008**

Karnataka state has the distinction of being one among very few states in the country to formulate a forward looking mineral policy in the year 2000 itself. This policy included progressive features like adoption of modern techniques in mining, transparency in granting mineral concessions, emphasis on value addition etc.

5.1 With the ushering in of the regime of economic reforms and opening up various sectors including mining sector, Karnataka state has achieved significant strides in various economic indicators. Mineral development as it exists now, marketing trends, encouraging future prospects and mounting demand for mineral based raw materials call for a review of mineral policy in the state. State Government has embarked on formulating the policy to ensure that mineral resources not only sustain this as a stand alone industry but also provide fillip for further expansion of value addition needs.

5.2 The main objectives of the State Mineral Policy are :

1. To optimize the States geological potential by scientific and detailed prospecting. State of the art techniques will be encouraged by combining the resources of the private and public sector.
2. To resolutely pursue the policy of preserving flora, fauna, and bio-diversity and ensure that the invaluable forest wealth is safeguarded while granting mineral concessions.
3. To promote transparency in granting mining concessions. To maximize value addition to the minerals extracted within the State by encouraging maximum investments in downstream industries. Priority will be given to the applicants who propose establishment of industries for value addition within the vicinity of the mineral bearing areas.
4. The government will explore the possibility of notifying mineral bearing areas to avoid clash of interest between mineral exploitation and other development activities.
5. To promote indigenous utilization of iron ore fines and beneficiation of low grade ores.
6. To review mining areas granted to public / private companies periodically to ascertain adherence to mining plan and discourage unproductive holding-on to large mineral resources.
7. To harness the mineral resources available in the form of float ore and to redress the difficulties encountered by farmers holding such lands with float ore, the state proposes to

evolve an appropriate scheme. In this effort State Public Sector Undertakings, farmers' fora/co-operatives, entrepreneurs would be enlisted.

8. In the case of large and massive deposits, to ensure that the minimum size of the area of mining lease with in the framework of rules such that scientific mining and optimum utilization of mineral resources is feasible. This is necessary to avoid sterilization of reserves and promote scientific mining and good environmental management.

9. To ensure better quality of life for mine workers and their families, adherence to minimum wages and other statutory requirements as per law will be enforced. Townships nearer to the workplace will be developed with health, educational, recreational and other utilities.

10. Data related to mining sector in the state like extent of resources, details of mining concessions granted, production levels, exports, indigenous utilization, value addition etc. will be systematically documented and disseminated to the stake holders through latest tools of information technology.

11. To apportion the revenue generated from mining towards development of mining areas / districts.

12. To formulate rules to regulate mineral trade and establishment of stockyards to ensure adherence to provisions of acts and rules by traders.

13. To evaluate the mineral resources of the State including the coastal belt and the sea bed.

14. To review the administration of minor minerals and streamline procedures.

15. To encourage companies to practice corporate social responsibility (CSR)

**6. MINERAL BASED INDUSTRIES**

6.1 Mining as a stand-alone industry needs to be encouraged as it provides large scale employment. It creates value by converting a resource into a product.

6.2 New mineral based industries should be set up to match the available raw material resources.

6.3 Existing and new industries should set up facilities to bring the available raw materials up to the required specifications by processes like beneficiation, pelletisation and sintering.

6.4 These industries will generate more employment and spawn auxiliary industries.

**7. SURVEY AND EXPLORATION**

7.1 The State Department of Mines and Geology and Geological Survey of India are the two main agencies which carry out survey and exploration of minerals in the State. These activities will be further continued and strengthened to discover new mineral deposits by deploying state of the art technology. Private entrepreneurs possessing such technology will be encouraged to expedite identification of new mineral deposits.

7.2 Since Karnataka has considerable coastline of 320 kms, apart from the exploration of coastal mineral deposits, the sea bed up to the exclusive economic zone needs to be explored. For the latter, the state will co-operate with the Ministry of Earth Sciences and the Geological Survey of India.

7.3 Particular attention will be paid to exploration for gold, base metals, platinum group of minerals, ilimenite, diamonds, as well as low grade iron ores.

7.4 The State Geological Programming Board shall prioritise the projects and programmes to maximize the benefits for the State.

section (3) of this section or the date specified in the order under sub-section (3), as the case may be, as if this Ordinance had not been promulgated.

(5) The liability to pay pension and gratuity to the persons referred to in sub-section (3) shall be the liability of the Karnataka State Law University.

**91. Transfer of accumulations in Provident Fund and other like funds.-** The sum at the credit of the provident fund accounts of the persons referred to in section 90 as on date specified in the order shall be paid to the Karnataka State Law University out of the accumulation in the superannuation fund and other like funds, if any, of the Karnataka University, the Bangalore University, the Tumkur University, the Mysore University, the Gulbarga University, the Mangalore University, the Women University, the Kuvempu University such amount as have been credited to the superannuation fund or other like funds, if any, on behalf of the persons referred to in section 90. The amount so paid shall form part of the superannuation fund or other like funds, if any, that may be established by the Karnataka State Law University for the benefit of its employees.

**92. Removal of Difficulty.-** (1) If any difficulty arises in giving effect to the provisions of this Ordinance, the Government may, by order published in the official Gazette, do anything which appears to it to be necessary for the purpose of removing the difficulty.

(2) No order made under sub-section (1) shall be questioned in any court of law on the ground that no difficulty as is referred to in the said sub-section existed or was required to be removed.

(3) Every order published under this section shall, as soon as may be after its publication, be laid before both houses of the State legislature.

**RAMESHWAR THAKUR**
**GOVERNOR OF KARNATAKA**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

**ವಿಶೇಷ ಪತ್ರಿಕೆ**

| **ಭಾಗ – IV-A** | **ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦** | **ನಂ. ೧೩೨೫** |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಇ 211 ಎಂಆರ್ಇ 2008(ಭಾಗ), ಬೆಂಗಳೂರು, ದಿನಾಂಕ : 24ನೇ ಅಕ್ಟೋಬರ್, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಗುಲ್ಬರ್ಗಾ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸದಸ್ಯರನ್ನಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ ಸಇ 211 ಎಂಆರ್ಇ 2008 ದಿನಾಂಕ 1-10-2008 ರಲ್ಲಿ ಮಾಡಿರುವ ಶ್ರೀ ಅಶೋಕ ಬಗಲಿ, ಅಫ್ಜಲ್‌ಪುರ ಇವರ ನಾಮನಿರ್ದೇಶನವನ್ನು ರದ್ದುಪಡಿಸಿ ಅವರ ಸ್ಥಾನದಲ್ಲಿ ಶ್ರೀ ಪ್ರಕಾಶ್ ಪಾಟೀಲ್, ಹಿರಾಪುರ, ಗುಲ್ಬರ್ಗಾ ತಾಲ್ಲೂಕು ಇವರನ್ನು ಗುಲ್ಬರ್ಗಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ - I | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ | ನಂ. ೧೩೨೬ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ. ರೇಷ್ಮ ಅಂಜುಂ, ಮಹಿಳಾ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಘಟಕ, ಮಾಚೋಹಳ್ಳಿ, ಬೆಂಗಳೂರು ಇವರ ಅನಧಿಕೃತ ಗೈರುಹಾಜರಿ ಸಂಬಂಧ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ - ಅಂತಿಮ ಆದೇಶ.

**ಓದಲಾಗಿದೆ :**
1) ನೋಟೀಸ್ ಸಂಖ್ಯೆ : ಡಿಪಿಜಿ/ಬೆಂ.ನ. 56/06-07, ದಿ: 14-03-2007.
2) ಪತ್ರಿಕಾ ಪ್ರಕಟಣೆ ದಿ : 28-11-2007.
3) ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಪಿಜಿ/ಬೆಂ.ನ/156/06-07, ದಿ : 19-03-2008.

**ಪ್ರಸ್ತಾವನೆ :**

ಡಾ. ರೇಷ್ಮ ಅಂಜುಂ, ಮಹಿಳಾ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಘಟಕ, ಮಾಚೋಹಳ್ಳಿ, ಬೆಂಗಳೂರು ಇವರು ದಿ: 21-08-2006 ರಿಂದ 121 ದಿನಗಳ ವೇತನ ರಹಿತ ರಜೆ ಕೋರಿ ದಿ : 19-08-2008 ರಂದು ಮನವಿ ಸಲ್ಲಿಸಿ ನಂತರ ಆ ದಿನದಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಈ ಆರೋಪಕ್ಕೆ ಸಂಬಂಧಿಸಿದಂತೆ, ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಆಯುಕ್ತರು, ಆರೋಗ್ಯ ಮತ್ತು ಕು. ಕ. ಸೇವೆಗಳು ರವರು ಜಾರಿ ಮಾಡಿ, ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶನ ನೀಡಿ ಸದರಿ ವೈದ್ಯರ ಮನೆಯ ಕಛೇರಿಯ ವಿಳಾಸಕ್ಕೆ "ನೋಂದಾಯಿತ ಅಂಚೆ ಸ್ವೀಕೃತಿ ಬಾಕಿ ಪತ್ರದ ಮೂಲಕ ಕಳುಹಿಸಿದ್ದು, ಅದು ವಾಪಸ್ಸು ಬಂದಿರುತ್ತದೆ." ಮೇಲೆ(1)ರ ಕಾರಣ ಕೇಳುವ ನೋಟೀಸಿಗೆ ಆಪಾದಿತ ಸರ್ಕಾರಿ ಅಧಿಕಾರಿಯು ನಿಗಧಿತ ಅವಧಿಯಲ್ಲಿ ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸದೆ ಹಾಗೂ ಪ್ರತಿಕ್ರಿಯೆ ಬಾರದೇ ಇದ್ದುದರಿಂದ ಹಾಗೂ ಅವರು ಯಾವ ಸ್ಥಳದಲ್ಲಿ ಇರುವರೆಂಬ ಬಗ್ಗೆ ತಿಳಿಸಿಲ್ಲದೇ ಇರುವುದರಿಂದ ಮತ್ತು ಅವರನ್ನು ಸಂಪರ್ಕಿಸಲು ಕೂಡ ಕಷ್ಟ ಸಾಧ್ಯವಾಗಿದ್ದರಿಂದ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 28(ಎ) ರನ್ವಯ ಕರ್ನಾಟಕದಲ್ಲಿ ಪ್ರಚಲಿತವಿರುವ (2) ದಿನ ಪತ್ರಿಕೆಗಳಲ್ಲಿ ಮೇಲೆ(2)ರಲ್ಲಿ ಓದಲಾದ ದಿನಾಂಕದಂದು ಅನಧಿಕೃತ ಗೈರುಹಾಜರಿ ಬಗ್ಗೆ ಪ್ರಕಟಣೆ ನೀಡಲಾಗಿತ್ತು. ಆದಾಗ್ಯೂ ಈ ವೈದ್ಯರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆದ್ದರಿಂದ ಮೇಲೆ (3)ರಲ್ಲಿ ಓದಲಾದ ಆಯುಕ್ತರ ಪತ್ರದಲ್ಲಿ ಡಾ: ರೇಷ್ಮ ಅಂಜುಂ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಘಟಕ, ಮಾಚೋಹಳ್ಳಿ, ಬೆಂಗಳೂರು ಉತ್ತರ ತಾಲ್ಲೂಕು ಇವರು ದಿ : 13-12-2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದು, ಈ ಸಂಬಂಧ ಸರ್ಕಾರದ ಹಂತದಲ್ಲಿ ಸೂಕ್ತ ದಂಡನೆ ವಿಧಿಸುವ ಬಗ್ಗೆ ನಿರ್ಣಯ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ಡಾ: ರೇಷ್ಮ ಅಂಜುಂ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಘಟಕ, ಮಾಚೋಹಳ್ಳಿ, ಬೆಂಗಳೂರು ಉತ್ತರ ತಾಲ್ಲೂಕು ಇವರು ದಿ : 13-12-2006 ರಿಂದ ಇದುವರೆವಿಗೂ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ, ಹಾಗೂ ದೋಷಾರೋಪಣಾ ಪಟ್ಟಿಗೆ ತಮ್ಮ ಲಿಖಿತ ಹೇಳಿಕೆಯನ್ನು ಸಹ ನೀಡದೇ ಇರುವುದರಿಂದ, ಇವರ ವಿಳಾಸ ಲಭ್ಯವಿಲ್ಲದೆ ಇರುವುದರಿಂದ ಇವರನ್ನು ಸಂಪರ್ಕಿಸಲು ಅಸಾಧ್ಯವಾಗಿರುವುದರಿಂದ ಮತ್ತು ಅದರ ಪ್ರಯುಕ್ತ ಇವರ ವಿರುದ್ಧ ಕೆಸಿಎಸ್(ಸಿಸಿಎ) ನಿಯಮಾವಳಿಗಳು, 1957ರ ನಿಯಮಗಳ ಅಡಿಯಲ್ಲಿ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಸಾಧ್ಯವಾಗದೇ ಇರುವುದರಿಂದ, ಸದರಿ ನಿಯಮಗಳ ನಿಯಮ 14(ii) ಮತ್ತು 8(viii) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಅಧಿಕಾರಿ ವಿರುದ್ಧ ಸದರಿ ನಿಯಮಗಳ ನಿಯಮ 11 ರಡಿಯಲ್ಲಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957ರ ನಿಯಮ 14(ii) ಮತ್ತು 8(viii) ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆಕುಕ 177 ಎಂಎಸ್ಎ 2008, ಬೆಂಗಳೂರು, ದಿನಾಂಕ**: 22-10-2008.

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ii) ಮತ್ತು 8(viii) ರಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ರೇಷ್ಮ ಅಂಜುಂ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಘಟಕ, ಮಾಚೋಹಳ್ಳಿ, ಬೆಂಗಳೂರು ಉತ್ತರ ತಾ. ರವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ | ನಂ. ೧೩೨೮ |
|---|---|---|

**OFFICE OF THE DIRECTOR MINES AND GEOLOGY SECRETARIAT**
KHANIJA BHAVAN, R.C. ROAD, BANGALORE – 560 001

**NOTIFICATION**

**No. D.M.G./SAND/AUCTION/2006-07, Bangalore, dated : 22nd October, 2008**

In exercise of the power conferred under Rule-56(1) of the Karnataka Minor Mineral Concession Rule 1994, the Director, Department of Mines and Geology here by notify that the following sand area are available belonging to State Government exempting the following areas from auction as contemplated under Rule-21(2) of KMMCR 94 and are reserved for the utilization of the public works invariably. The mineral in these areas shall have to be extracted as per the provision of KMMCR 1994.

| Sl. No. | Village Taluk | River Bed or Tank Bed | Sy. No. | Extent in Acres | Bounded by |
|---|---|---|---|---|---|
| 1. | Talakayalabetta Sidlaghatta | Nala | - | 4.20 | North : Sy. No. 86, 88, 87 & 58<br>South : 83 to 85 & Dasarahalli border<br>East : East:Papgagni River bed<br>West : Papagni River bed |
| 2. | Yelagadahalli Chickballapura | Nala | - | 16.00 | North : Nala bed<br>South : Nala bed<br>East : Boyinahalli & Peresandra village boundaries.<br>West : Sy. No. 176 to 179, 181, 184, 189, 190 |
| 3. | Gaggirallahalli Gudibande | Nala | - | 2.20 | North : Part of Nala<br>South : Part of Nala<br>East : Part of Nala<br>West : Part of Nala |
| 4. | Papathimmana halli Chintamani | Nala | - | 2.20 | North : River Papagni<br>South : River Papagni<br>East : River Papagni<br>West : River Papagni |
| 5. | Talakayalabetta Shidlaghatta | Tank bed | 69 | 5.00 | North : Part of Sy. No. 69<br>South : Part of Sy. No. 69<br>West : Part of Sy. No. 69<br>East : Part of Sy. No. 69 |

DIRECTOR

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ | ನಂ. ೧೩೨೯ |
|---|---|---|

ಕಾರ್ಮಿಕ ಸಚಿವಾಲಯ

ಅಧಿಸೂಚನೆ

ಸಂ : ಕಾಇ : 119 : ಎಲ್‌ಡಬ್ಲ್ಯೂಎ : 2008, ಬೆಂಗಳೂರು, ದಿನಾಂಕ : 16ನೇ ಅಕ್ಟೋಬರ್, 2008

ಕರ್ನಾಟಕ ರಾಜ್ಯ ಗುತ್ತಿಗೆ ಕಾರ್ಮಿಕರ ಸಲಹಾ ಮಂಡಳಿಯನ್ನು ರಚಿಸಿರುವ ಇದುವರೆವಿಗೂ ಹೊರಡಿಸಲಾದ ಎಲ್ಲಾ ಸರ್ಕಾರಿ ಅಧಿಸೂಚನೆಗಳನ್ನು ರದ್ದುಪಡಿಸುತ್ತಾ, ಗುತ್ತಿಗೆ ಕಾರ್ಮಿಕರ (ನಿಯಂತ್ರಣ ಮತ್ತು ರದ್ದತಿ) ಅಧಿನಿಯಮ 1970 (1970ರ ಕೇಂದ್ರದ ಅಧಿನಿಯಮ ಸಂಖ್ಯೆ : 37) ಕಲಂ 4 ಹಾಗೂ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ದತಿ) ಕರ್ನಾಟಕ ನಿಯಮಾವಳಿಗಳು 1974ರ ನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡವರನ್ನು ಕರ್ನಾಟಕ ರಾಜ್ಯ ಗುತ್ತಿಗೆ ಕಾರ್ಮಿಕರ ಸಲಹಾ ಮಂಡಳಿಗೆ ಈ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಮುಂದಿನ ಮೂರು ವರ್ಷಗಳ ಅವಧಿಗೆ ನೇಮಕ ಮಾಡಲಾಗಿದೆ.

| | | |
|---|---|---|
| 1 | ಕಾರ್ಮಿಕ ಸಚಿವರು | ಅಧ್ಯಕ್ಷರು |
| 2 | ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕಾರ್ಮಿಕ ಭವನ, ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಬೆಂಗಳೂರು | ಸದಸ್ಯರು |
| | **ರಾಜ್ಯ ಸಾರ್ವಜನಿಕ ಉದ್ದಿಮೆಗಳ ಪ್ರತಿನಿಧಿಗಳು** | |
| 4 | ವ್ಯವಸ್ಥಾಪಕ ನಿರ್ದೇಶಕರು ಅಥವಾ ಅವರ ಪ್ರತಿನಿಧಿ, ಕರ್ನಾಟಕ ಪವರ್ ಕಾರ್ಪೋರೇಷನ್, ಶಕ್ತಿ ಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು | ಸದಸ್ಯರು |
| | **ಖಾಸಗಿ ಉದ್ದಿಮೆಗಳ ಪ್ರತಿನಿಧಿಗಳು** | |
| 5 | ವ್ಯವಸ್ಥಾಪಕ ನಿರ್ದೇಶಕರು, ಗೋಕುಲದಾಸ್ ಇಮೇಜಸ್, ಗೊರಗುಂಟೆ ಪಾಳ್ಯ, ತುಮಕೂರು ರಸ್ತೆ, ಬೆಂಗಳೂರು-22 | ಸದಸ್ಯರು |
| 6 | ಶ್ರೀ ಜೆ. ಪುರುಷೋತ್ತಮ್, ವಕೀಲರು ಹಾಗೂ ಅಧ್ಯಕ್ಷರು, ಮೈಸೂರು ಇಂಡಸ್ಟ್ರೀಸ್ ಮ್ಯಾನೇಜ್‌ಮೆಂಟ್ ಅಸೋಸಿಯೇಷನ್, ನಂ. 524, ಎಸ್ 5, 1ನೇ ಮಹಡಿ, 3ನೇ ಕ್ರಾಸ್, 15ನೇ ಮುಖ್ಯರಸ್ತೆ, ಸರಸ್ವತಿ ಪುರಂ, ಮೈಸೂರು-570 009. | ಸದಸ್ಯರು |
| | **ಗುತ್ತಿಗೆದಾರರ ಪ್ರತಿನಿಧಿಗಳು** | |
| 7 | ಶ್ರೀ ನವೀನ್ ಆರ್. ಶೆಟ್ಟಿ, ಆರ್.ಎನ್.ಎಸ್. ಇನ್‌ಫ್ರಾಸ್ಟ್ರಕ್ಚರ್ ಅ, ಮುರುಡೇಶ್ವರ ಭವನ, ಗೋಕುಲ ರಸ್ತೆ, ಹುಬ್ಬಳ್ಳಿ. | ಸದಸ್ಯರು |
| 8 | ಶೋಭಾ ಡೆವಲಪರ್ಸ್, ನಂ. 368, 7ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು-27 | ಸದಸ್ಯರು |
| | **ಸಾರ್ವಜನಿಕ ಉದ್ದಿಮೆಯ ಕಾರ್ಮಿಕರ ಪ್ರತಿನಿಧಿಗಳು** | |
| 9 | ಶ್ರೀ ಮೈಕಲ್ ಫರ್ನಾಂಡಿಸ್, ಕಾನೂನು ಸಲಹೆಗಾರರು, ಕೆ.ಪಿ.ಸಿ.ಎಲ್. ಎಂಪ್ಲಾಯೀಸ್ ಯೂನಿಯನ್, ನಂ. 5, ಮಿರ್ಟಲ್ ಲೈನ್, ರಿಚ್‌ಮಂಡ್ ಟೌನ್, ಬೆಂಗಳೂರು-25 | ಸದಸ್ಯರು |
| | **ಖಾಸಗಿ ಉದ್ದಿಮೆಯ ಪ್ರತಿನಿಧಿಗಳು** | |
| 10 | ಶ್ರೀ ವಿ.ಜಿ.ಕೆ ನಾಯರ್, ಅಧ್ಯಕ್ಷರು, ಸಿಐಟಿಯು, ವಿ.ಜಿ. ಗೋಪಾಲ್ ಬಿಲ್ಡಿಂಗ್, ಲಾಲ್‌ಬಾಗ್ ಫೋರ್ಟ್ ರಸ್ತೆ, ಬೆಂಗಳೂರು | ಸದಸ್ಯರು |
| 11 | ಶ್ರೀ ಅಲ್ಲಂಪಲ್ಲಿ ವೆಂಕಟರಾಮ್, ಅಧ್ಯಕ್ಷರು, ಭಾರತೀಯ ಮಜ್ದೂರ್ ಸಂಘ, (ಬಿಎಂಎಸ್) ಮೂವೀ ಲ್ಯಾಂಡ್ ಚಿತ್ರಮಂದಿರ ಎದಿರು, ಸುಬೇದಾರ್ ಛತ್ರಂ ರಸ್ತೆ, ಬೆಂಗಳೂರು – 09. | ಸದಸ್ಯರು |
| | **ಗುತ್ತಿಗೆ ಕಾರ್ಮಿಕ ಪ್ರತಿನಿಧಿಗಳು** | |
| 12 | ಶ್ರೀ ಗೋಪಾಲಗೌಡ, ಅಧ್ಯಕ್ಷರು, ಕರ್ನಾಟಕ ರೆಡಿಮಿಕ್ಸ್ ಕಾಂಕ್ರೀಟ್ ವರ್ಕರ್ಸ್ ಯೂನಿಯನ್, ಸಿಐಟಿಯು, ಉದಯನಗರ, ದೂರವಾಣಿ ನಗರ ಪೋಸ್ಟ್, ಬೆಂಗಳೂರು-16 | ಸದಸ್ಯರು |
| 13 | ಅಧ್ಯಕ್ಷರು, ಅಥವಾ ಅವರ ಪ್ರತಿನಿಧಿ, ಬಿ.ಇ.ಎಂ.ಎಲ್. ಕಂಟ್ರಾಕ್ಟ್ ವರ್ಕರ್ಸ್ ಯೂನಿಯನ್, ನಂ. 1, ಕಾರ್ಪೋರೇಷನ್ ಕಟ್ಟಡ, ಬಿಎಂಸಿ ರಾಮನ್ ರಸ್ತೆ, ಬೆಂಗಳೂರು. | ಸದಸ್ಯರು |

| | | |
|---|---|---|
| 14 | ಉಪ ಕಾರ್ಮಿಕ ಆಯುಕ್ತರು (ಪ್ರಚಾರ ಮತ್ತು ಅಂಕಿ ಅಂಶ) ಕಾರ್ಮಿಕ ಆಯುಕ್ತರ ಕಛೇರಿ, ಕಾರ್ಮಿಕ ಭವನ, ಬೆಂಗಳೂರು-29. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಹಾಗೂ ಪೀಠಾಧಿಕಾರಿ-2
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

**ಭಾಗ - I** | **ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦** | **ನಂ. ೧೩೩೦**

## ಕರ್ನಾಟಕ ಸರ್ಕಾರದ ನಡವಳಿಗಳು

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ದಿವಂಗತ ಡಾ: ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಉನ್ನತಮಟ್ಟದ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನದ ಉಸ್ತುವಾರಿ ನಡೆಸಲು ಉನ್ನತ ಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 26/09/2008 ರಂದು ನಡೆದ ಸಚಿವ ಸಂಪುಟ ಸಭೆಯ ನಿರ್ಣಯ.

**ಪ್ರಸ್ತಾವನೆ :**

ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ದಿವಂಗತ ಡಾ: ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರಿ ಸಮಿತಿಯೊಂದನ್ನು ಅಕ್ಟೋಬರ್ 2000 ರಲ್ಲಿ ರಚಿಸಲಾಗಿತ್ತು. ಈ ಸಮಿತಿಯು ರಾಜ್ಯದಲ್ಲಿದ್ದ ಪ್ರಾದೇಶಿಕ ಅಸಮತೋಲನೆಯನ್ನು ಅಧ್ಯಯನ ಮಾಡಿ ಸರ್ಕಾರಕ್ಕೆ ಸೂಕ್ತ ಸಲಹೆಗಳನ್ನು ನೀಡುವುದರ ಮೂಲಕ ಅಂತರ ಜಿಲ್ಲೆ ಹಾಗೂ ಅಂತರ ಪ್ರಾಂತೀಯ ಅಸಮತೋಲನೆಯನ್ನು ಕಡಿಮೆ ಮಾಡುವುದಲ್ಲದೇ ಸಮತೋಲನ ಅಭಿವೃದ್ಧಿಯತ್ತ ಯೋಜನೆಗಳನ್ನು ಅನುಷ್ಠಾನಗೊಳಿಸಲು ಒಂದು ಸಾಂಸ್ಥಿಕ ತಾಂತ್ರಿಕತೆಯ ಸೂತ್ರವನ್ನು ಶಿಫಾರಸ್ಸು ಮಾಡಿದೆ. ಸದರಿ ಸಮಿತಿಯು ತನ್ನ ಅಂತಿಮ ವರದಿಯನ್ನು ಜೂನ್ 2002 ರಲ್ಲಿ ಸಲ್ಲಿಸಿದೆ.

ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ರಚಿಸಲಾದ ಉನ್ನತಾಧಿಕಾರಿ ಸಮಿತಿಯು 114 ತಾಲ್ಲೂಕುಗಳನ್ನು ಅತ್ಯಂತ ಹಿಂದುಳಿದವು, ಅತೀ ಹಿಂದುಳಿದವು ಹಾಗೂ ಹಿಂದುಳಿದವು ಎಂದು ವರ್ಗೀಕರಿಸಿದೆ. ಇನ್ನುಳಿದ 61 ತಾಲ್ಲೂಕುಗಳನ್ನು ಉಳಿದವುಗಳಿಗಿಂತ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳೆಂದು ಪರಿಗಣಿಸಲಾಗಿದೆ.

ಈ 114 ತಾಲ್ಲೂಕುಗಳ ವಿಭಾಗವಾರು ವರ್ಗೀಕರಣವು ಈ ಕೆಳಕಂಡಂತಿದೆ.

| **ವಿಭಾಗಗಳು** | **ಅತ್ಯಂತ ಹಿಂದುಳಿದವು** | **ಅತೀ ಹಿಂದುಳಿದವು** | **ಹಿಂದುಳಿದವು** | **ಒಟ್ಟು** |
|---|---|---|---|---|
| ಗುಲ್ಬರ್ಗಾ | 21 | 5 | 2 | 28 |
| ಬೆಳಗಾಂ | 5 | 12 | 14 | 31 |
| ಬೆಂಗಳೂರು | 11 | 13 | 9 | 33 |
| ಮೈಸೂರು | 2 | 10 | 10 | 22 |
| **ಒಟ್ಟು** | **39** | **40** | **35** | **114** |

ಹೀಗೆ ಗುರುತಿಸಲಾದ 114 ತಾಲ್ಲೂಕುಗಳ ಪೈಕಿ 59 ತಾಲ್ಲೂಕುಗಳು ರಾಜ್ಯದ ಉತ್ತರ ಭಾಗದಲ್ಲಿವೆ (ಗುಲ್ಬರ್ಗಾ / ಬೆಳಗಾಂ ಪ್ರದೇಶ) ಮತ್ತು 55 ತಾಲ್ಲೂಕುಗಳು ದಕ್ಷಿಣ ಭಾಗದಲ್ಲಿವೆ (ಮೈಸೂರು / ಬೆಂಗಳೂರು ಪ್ರದೇಶ).

2. ಪ್ರಾದೇಶಿಕ ಅಸಮತೋಲವನ್ನು ನಿವಾರಿಸಲು ರಚಿಸಲಾಗಿದ್ದ ಉನ್ನತಮಟ್ಟದ ಸಮಿತಿಯ ಹಲವಾರು ಶಿಫಾರಸ್ಸುಗಳನ್ನು ಇಲ್ಲಿಯವರೆಗೆ ಹಿಂದಿನ ಸರ್ಕಾರಗಳು ಅನುಷ್ಠಾನಗೊಳಿಸಿವೆ. ಪ್ರಮುಖವಾದ ಶಿಫಾರಸ್ಸಾದ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುಷ್ಠಾನವನ್ನು 2007-08ರ ಆಯವ್ಯಯದಲ್ಲಿ ಘೋಷಿಸಲಾಗಿದೆ. ರಾಜ್ಯದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ವಿಶೇಷವಾಗಿ ಉತ್ತರ ಕರ್ನಾಟಕ ಭಾಗಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡುವ ಹಿನ್ನೆಲೆಯಲ್ಲಿ, ವಿದ್ವಾಂಸರ (Academia) ಆಡಳಿತಾಧಿಕಾರಿಗಳ, ಸಾರ್ವಜನಿಕ ಜೀವನದಲ್ಲಿನ ವ್ಯಕ್ತಿಗಳ (Persons in public life) ಹಾಗೂ ಇನ್ನಿತರನ್ನೊಳಗೊಂಡ ಒಂದು ಉನ್ನತಮಟ್ಟದ ಸಮಿತಿಯನ್ನು ರಚಿಸುವುದು ಸೂಕ್ತವೆಂದು ಸರ್ಕಾರವು ಭಾವಿಸಿದೆ. ಸದರಿ ಸಮಿತಿಯು ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ರಚಿಸಲಾಗಿದ್ದ ಉನ್ನತಮಟ್ಟ ಸಮಿತಿಯು ಮಾಡಿರುವ ಶಿಫಾರಸ್ಸುಗಳ ಅನುಷ್ಠಾನವನ್ನು ಪರಿವೀಕ್ಷಿಸುವುದರ ಮೂಲಕ ಅಸಮತೋಲನೆಯ ನಿವಾರಣೆಯನ್ನು ತ್ವರಿತಗೊಳಿಸಲು ಸೂಕ್ತವಾದ ಕ್ರಮ ವಹಿಸಲು ಸಲಹೆಯನ್ನು ನೀಡುವುದು.

3. ಸರ್ಕಾರಿ ಆದೇಶ ಸಂಖ್ಯೆ : ಪಿಡಿ 77 ಯೋವಿವಿ 2008, ದಿನಾಂಕ : 30/09/2008 ರನ್ವಯ ಪ್ರಾದೇಶಿಕ ಅಸಮತೋಲನವನ್ನು ನಿವಾರಿಸಲು ರಚಿಲಾಗಿದ್ದ ಉನ್ನತಮಟ್ಟದ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನವನ್ನು ಪರಿವೀಕ್ಷಿಸಲು ಸರ್ಕಾರವು ವಿಧಾನ ಪರಿಷತ್ ಸದಸ್ಯರಾದ ಮಾನ್ಯ ಶ್ರೀ ಶಶೀಲ್ ಜಿ. ನಮೋಶಿಯವರನ್ನು ಅಧ್ಯಕ್ಷರನ್ನಾಗಿ ನೇಮಿಸಿದೆ.
4. ಆದುದರಿಂದ ಇನ್ನಿತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಿ, ಸದರಿ ಉನ್ನತಮಟ್ಟದ ಸಮಿತಿಯನ್ನು ರಚಿಸುವುದು ಅವಶ್ಯಕವಾಗಿದೆ ಹಾಗೂ ಈ ಸಮಿತಿಯ ಪರಿಶೀಲನಾಂಶಗಳನ್ನು (terms of reference) ಉಚ್ಛರಿಸಬೇಕಾಗಿದೆ. ಅಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಿಡಿ 74 ಯೋವಿವಿ 2008, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2008.**

ಪ್ರಾದೇಶಿಕ ಅಸಮತೋಲನವನ್ನು ನಿವಾರಿಸಲು ರಚಿಸಲಾಗಿದ್ದ ಉನ್ನತಮಟ್ಟದ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನವನ್ನು ಪರಿವೀಕ್ಷಿಸಲು ಸರ್ಕಾರವು ಈ ಕೆಳಗಿನಂತೆ ಒಂದು ಉನ್ನತಮಟ್ಟದ ಸಮಿತಿಯನ್ನು ರಚಿಸಿದೆ.

| | | | |
|---|---|---|---|
| 1. | ಶ್ರೀ ಶಶೀಲ್ ಜಿ.ನಮೋಶಿ | - | ಅಧ್ಯಕ್ಷರು |
| 2. | ಡಾ: ಪಿ.ಆರ್. ಪಂಚಮುಖಿ, ಧಾರವಾಡ | - | ಸದಸ್ಯರು |
| 3. | ಡಾ: ಅಬ್ದುಲ್ ಅಜೀಜ್, ಐಎಸ್ಇಸಿ | - | ಸದಸ್ಯರು |
| 4. | ಶ್ರೀ ಎ.ಆರ್. ಕೃಷ್ಣಮೂರ್ತಿ, ಮಾಜಿ ವಿಧಾನಸಭಾ ಸದಸ್ಯರು, ಚಾಮರಾಜನಗರ | - | ಸದಸ್ಯರು |
| 5. | ಡಾ: ಸಿರಿಯಣ್ಣನವರ್ ಆರ್.ಬಿ, ಮಾಜಿ ವಿಧಾನಸಭಾ ಸದಸ್ಯರು, ನವಲಗುಂದ, ಧಾರವಾಡ ಜಿಲ್ಲೆ | - | ಸದಸ್ಯರು |
| 6. | ಡಾ: ಛಾಯ ದೇಗಾಂಕರ್ ಗುಲ್ಬರ್ಗಾ ವಿಶ್ವವಿದ್ಯಾನಿಲಯ | - | ಸದಸ್ಯರು |
| 7. | ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | - | ಸದಸ್ಯರು |
| 8. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | - | ಸದಸ್ಯರು |
| 9. | ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಪ್ರಾಧಿಕಾರ, ನಗರ ಸಭೆಗಳು ಹಾಗೂ ಪುರಸಭೆಗಳು, ನಗರಾಭಿವೃದ್ಧಿ ಇಲಾಖೆ | - | ಸದಸ್ಯರು |
| 10. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | - | ಸದಸ್ಯರು |
| 11. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | - | ಸದಸ್ಯರು |
| 12. | ಮಾನ್ಯ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು | - | ಸದಸ್ಯರು |

**2.ಸದರಿ ಉನ್ನತಮಟ್ಟದ ಸಮಿತಿಯ ಪರಿಶೀಲನಾಂಶಗಳ (terms of reference) ಕೆಳಕಂಡಂತಿವೆ** :

ಎ. ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ರಚಿಸಲಾಗಿದ್ದ ಉನ್ನತಮಟ್ಟದ ಸಮಿತಿಯು ಮಾಡಿರುವ ಶಿಫಾರಸ್ಸುಗಳ ಅನುಷ್ಠಾನದ ವಸ್ತುಸ್ಥಿತಿಯನ್ನು ಪರಿವೀಕ್ಷಿಸಿ, ಇನ್ನೂ ಅನುಷ್ಠಾನಗೊಳಿಸಬೇಕಾದ ಶಿಫಾರಸ್ಸುಗಳ ಬಗ್ಗೆ ಕ್ರಮವಹಿಸಲು ಸೂಕ್ತ ಸಲಹೆಗಳನ್ನು ನೀಡುವುದು.

ಬಿ.2007-08ರ ಆಯವ್ಯಯದಲ್ಲಿ ಘೋಷಿಸಲಾದ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ (2007-08 ರಿಂದ 2014-15 ರವರೆಗೆ) ಅನುಷ್ಠಾನವನ್ನು ಪರಿವೀಕ್ಷಿಸುವುದು ಹಾಗೂ ಇನ್ನುಳಿದ ಆರ್ಥಿಕ ವರ್ಷಗಳಲ್ಲಿ ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅವಶ್ಯಕವೆನಿಸಿದ ಶಿಫಾರಸ್ಸುಗಳನ್ನು ನೀಡುವುದು.

ಸಿ.ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ಮಾಡಿರುವ ಶಿಫಾರಸ್ಸುಗಳ ಅನುಷ್ಠಾನಕ್ಕೆ (ವಿಶೇಷ ಅಭಿವೃದ್ಧಿ ಯೋಜನೆ ಒಳಗೊಂಡಂತೆ) ಹೂಡಿರುವ ಬಂಡವಾಳದಿಂದ ಹೊರಹೊಮ್ಮುವ ಪರಿಣಾಮ ಮತ್ತು ಫಲದ ಬಗ್ಗೆ ಒಂದು ಮೌಲ್ಯಮಾಪನವನ್ನು ನಡೆಸುವುದು ಹಾಗೂ 2009-10 ರಲ್ಲಿ ಹೊಸದಾಗಿ ತಾಲ್ಲೂಕುವಾರು ಸಮಗ್ರ, ಸಂಯುಕ್ತ ಅಭಿವೃದ್ಧಿ ಸೂಚ್ಯಾಂಕಗಳನ್ನು (CCDI) (ಸೂಕ್ತವೆನಿಸಿದಲ್ಲಿ ಪ್ಯಾರಮೀಟರ್‌ಗಳನ್ನು (Parameters) ಮಾರ್ಪಾಡು ಮಾಡುವುದರ ಮೂಲಕ) ತಯಾರಿಸುವುದು. ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುಷ್ಠಾನದಲ್ಲಿ ಅವಶ್ಯವಾದ ಮಧ್ಯಾವಧಿ ತಿದ್ದುಪಡಿಗೆ ಇದರಿಂದ ಅನುವಾಗುವುದು.

ಡಿ. ಸರ್ಕಾರದ ನಿರ್ದೇಶನದಂತೆ ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸಲು ಸಂಬಂಧಿತ ಇನ್ನಿತರ ಕಾರ್ಯಭಾರವನ್ನು ವಹಿಸುವುದು.

3. ಸದರಿ ಉನ್ನತಮಟ್ಟದ ಸಮಿತಿಯ ಅವಧಿಯು 2 ವರ್ಷಗಳಿಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ.
4. ಸದರಿ ಸಮಿತಿಯ ಕಾರ್ಯನಿರ್ವಹಣೆಯ ವೆಚ್ಚಕ್ಕೆ ಸಂಬಂಧಿಸಿದ ಹಣವನ್ನು ಯೋಜನೇತರ ಬಾಬ್ತಿನಲ್ಲಿ ಆರ್ಥಿಕ ಇಲಾಖೆಯು ಪ್ರತ್ಯೇಕವಾದ ಆಯವ್ಯಯವನ್ನು ಒದಗಿಸುವುದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : ಆಇ/1365/ವೆಚ್ಚ-7/2008 ದಿನಾಂಕ : 14/10/2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ - I | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ | ನಂ. ೧೩೩೧ |
| --- | --- | --- |

**ಕರ್ನಾಟಕ ಸರ್ಕಾರದ ನಡವಳಿಗಳು**

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ (Vision Group of Science & Technology) ರಚನೆಗೆ ಅಧ್ಯಕ್ಷರನ್ನು ಮತ್ತು ಸದಸ್ಯರುಗಳನ್ನು ನಾಮನಿರ್ದೇಶಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ವಿಯಇ 51 ವಿತ್ರಮ 2008 ದಿ. : 11-09-2008.

2) ಅಧ್ಯಕ್ಷರು, National Research Professor & Linus Pauling Research Professor, ಇವರ ಪತ್ರ ಸಂಖ್ಯೆ : SAC-PM/39/08-471, ದಿನಾಂಕ : 24.09.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ ಪ್ರೊ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು ರವರನ್ನು ರಾಜ್ಯದ ಆರ್ಥಿಕ ವಲಯದ ವಿವಿಧ ಕ್ಷೇತ್ರಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಅಳವಡಿಕೆ "ಕರ್ನಾಟಕ ರಾಜ್ಯದ ವಿಜ್ಞಾನ ಮತ್ತು ತಂತ್ರಜ್ಞಾನ" ನೀತಿ ರೂಪಿಸುವಲ್ಲಿ ಸಲಹೆ/ಮಾರ್ಗದರ್ಶನ ಮತ್ತು ಅವರ ಸಮರ್ಥ ನಾಯಕತ್ವದಲ್ಲಿ "ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ" (Vision Group of Science & Technology) ರಚಿಸಲು ಉದ್ದೇಶಿಸಿ ಸದರಿ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರ. ಸಂ. (2) ರಲ್ಲಿನ ಪ್ರೊ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು-560064 ರವರ ದಿನಾಂಕ : 24.09.2008ರ ಪತ್ರದಲ್ಲಿ "ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ" ಕ್ಕೆ ಸದಸ್ಯರ ಸಮೂಹದ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ** : **ವಿಯಇ 51 ವಿತ್ರಮ 2008, ಬೆಂಗಳೂರು, ದಿನಾಂಕ** : **14/10/2008**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರೊ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ 15 ಸದಸ್ಯರನ್ನೊಳಗೊಂಡಂತೆ ರಚಿಸಲಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ (Vision Group of Science & Technology) ಈ ಕೆಳಕಂಡ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

1. ಪ್ರೊ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು-560064. ಅಧ್ಯಕ್ಷರು, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ. - ಅಧ್ಯಕ್ಷರು
2. ಡಾ. ಕೆ. ಕಸ್ತೂರಿರಂಗನ್, ನಿರ್ದೇಶಕರು, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್‌ವಾನ್ಸ್‌ಡ್ ಸ್ಟಡೀಸ್, ಭಾರತೀಯ ವಿಜ್ಞಾನ ಸಂಸ್ಥೆ ಆವರಣ, ಬೆಂಗಳೂರು-12 - ಸದಸ್ಯರು
3. ಪ್ರೊ. ರೋದಾಮ್ ನರಸಿಂಹ, ಜವಹರಲಾಲ್ ನೆಹರು ಸೆಂಟರ್ ಫಾರ್ ಅಡ್‌ವಾನ್ಸ್‌ಡ್ ಸೈನ್‌ಟಿಫಿಕ್ ರೀಸರ್ಚ್ ಬೆಂಗಳೂರು. - ಸದಸ್ಯರು
4. ಪ್ರೊ. ಕೆ. ವಿಜಯರಾಘವನ್, ನಿರ್ದೇಶಕರು, ನ್ಯಾಷನಲ್ ಸೆಂಟರ್ ಫಾರ್ ಬಯೋಲಾಜಿಕಲ್ ಸೈನ್ಸ್, ಜಿಕೆವಿಕೆ ಕ್ಯಾಂಪಸ್, ಬೆಂಗಳೂರು-65. - ಸದಸ್ಯರು
5. ಪ್ರೊ. ಪಿ. ಬಲರಾಮ್, ನಿರ್ದೇಶಕರು, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. - ಸದಸ್ಯರು
6. ಪ್ರೊ. ಹೆಚ್.ಪಿ. ಕಿನ್‌ಚಾ, ವೈಸ್ ಚಾನ್‌ಸಲರ್, ವಿಶ್ವೇಶ್ವರಯ್ಯ ಟೆಕ್ನಾಲಾಜಿಕಲ್ ಯೂನಿವರ್‌ಸಿಟಿ, ಬೆಳಗಾವಿ. - ಸದಸ್ಯರು

7. ಪ್ರೊ. ಬಿ.ಜಿ. ಮೂಲಿಮನಿ, - ಸದಸ್ಯರು
ವೈಸ್ ಚಾನ್ಸಲರ್, ಗುಲಬರ್ಗಾ ಯೂನಿವರ್ಸಿಟಿ
8. ಡಾ. ದಿಲಿಫ್ ರನ್‌ಜೇಕರ್, - ಸದಸ್ಯರು
ಅಜೀಮ್ ಪ್ರೇಮ್‌ಜಿ ಫೌಂಡೇಷನ್, ವಿಪ್ರೋ, ಬೆಂಗಳೂರು.
9. ಡಾ. ವಿಜಯ ಚಂದ್ರು, - ಸದಸ್ಯರು
ಸಿ.ಇ.ಓ. ಸ್ಟ್ರಾಂಡ್ಸ್ ಲೈಫ್ ಸೈನ್ಸಸ್, ನಂ. 237, ಸರ್. ಸಿ.ವಿ. ರಾಮನ್ ಅವೆನ್ಯೂ, ರಾಜಮಹಲ್ ವಿಲಾಸ್, ಸದಾಶಿವನಗರ, ಬೆಂಗಳೂರು-80.
10. ಶ್ರೀ ಅಶೋಕ್‌ಕುಮಾರ್ ಸಿ. ಮನೋಲಿ - ಸದಸ್ಯ ಕಾರ್ಯದರ್ಶಿ
ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦) | ನಂ. ೧೩೩೨ |
|---|---|---|

**PROCEEDINGS OF THE GOVERNMENT OF KARNATAKA**

**PLANNING, PROGRAMME MONITORING AND STATISTICS SECRETARIAT**

**Subject :** Constitution of a Vision Group for “Karnataka 2020”.

**PREAMBLE:**

The Hon’ble CM in his Budget speech (in July, 2008) had mentioned that “During the last six decades since independence the State has achieved considerable progress and yet we have a long way to go in realizing our development dreams. The present development ranking of the State is 7th position among the major States in the Country. This is not in keeping with the immense potential and the high aspirations of the people of Karnataka. The vision our government is to put Karnataka at the top of the Developed States of the Country”

In this regard the Budget speech had also indicated that the State Government had initiated the process of preparing a blue print for realizing the full potential of the State for development in the form of a Vision document “Karnataka 2020”. The blueprint will unfold the strategy for achieving the total eradication of poverty, eliminating regional imbalances in the State, upgrading the facilities for an orderly and comfortable life for the people in both rural and urban areas and promoting social and economic equality in the State”

The State Planning Board has been engaged in this exercise for sometime now and the draft of the document is at the final stage.

In the light of the above, it is felt necessary to constitute a Vision Group under the Chairmanship of Chief Minister with eminent personalities from various fields to guide the state in the finalization of Vision Document and its subsequent implementation.

Hence the Order.

**Government Order No. PD 59 SPB 2008, Bangalore, dated : 10th October, 2008**

A Vision Group is constituted with immediate effect until further orders as follows :

| | | | |
|---|---|---|---|
| (i) | Chief Minister | - | Chairman |
| (ii) | Chief Secretary to Govt. | - | Member Secretary |
| (iii) | Deputy Chairman, SPB | - | Member |
| (iv) | ACS & Development Commr. | - | Member |

| | | | |
|---|---|---|---|
| (v) | Principal Secretary to Government Finance Department | - | Member |
| (vi) | Principal Secretary to Government Planning, Programme Monitoring and Statistics Department | - | Member |
| (vii) | Shri Basavaraj Patil,<br>Ex. MP, Sedam, Gulbarga Dist | - | Member |
| (viii) | Dr. H. Sudarshan<br>Hon'ble Secretary,<br>Karuna Trust, No. 686, 16th Main, 4th T Block, Jayanagar, Bangalore – 560 001. | - | Member |
| (ix) | Shri Nandan Nilenkeni<br>CEO and Managing Director, Infosys Technologies Ltd., Plot No. 44, Electronics City, Hosur Road, Bangalore – 561 229. | - | Member |
| (x) | Dr. M. Govind Rao<br>Director, NIPFP, No. 18/2, Satsang Vihar Marg, Special Institutional Area, New Delhi – 110 067. | - | Member |
| (xi) | Shri M.P. Kumar<br>Chairman and CEO,<br>Global Edge Software, No. 217, JP Royal, Sampige Road, Malleswaram, Bangalore – 03. | - | Member |
| (xii) | Shri Vinay Hegde<br>NITTE Education Institutions, Mangalore | - | Member |
| (xiii) | Shri A.N. Yellappareddy<br>No. 9c, 1st Main, 14th A Cross, 5th Block, MCHS Colony, HSR Layout, 6th Sector,<br>Bangalore–560 102. | - | Member |
| (xiv) | Shri Samuel Paul<br>Public Affairs Centre, 422, 6th Block, 80 Feet Road, Koramangala, Bangalore – 560 034. | - | Member |
| (xv) | Shri Vijay Sankeshwar<br>MLC, VRL Logistics Ltd., Girija Annexe, Circuit House Road, Hubli – 580 029. | - | Member |
| (xvi) | Capt. G.R. Gopinath<br>No. 35/2, Opp. Canara Bank, Deccan Aviation Pvt. Ltd., Cunningham Road, Bangalore | - | Member |
| (xvii) | Director<br>Institute for Social & Economic Change,<br>Dr. V.K.R.V. Rao Road, Nagarabhavi,<br>Bangalore – 560 072. | - | Member |
| (xviii) | Director<br>Indian Institute of Management, Bannergatta Road, Bangalore – 560 076. | - | Member |
| (xix) | Director,<br>NIAS<br>Indian Institute of Science Campus, Bangalore | - | Member |
| (xx) | Dr. B.S. Ajay Kumar<br>Chairman,<br>Bharat Hospital & Institute of Oncology,<br>No. 438, Outer Ring Road, Hebbal, Mysore-570016 | - | Member |
| (xxi) | Dr. R. Balasubramaniam,<br>Founder and President,<br>Swami Vivekananda Yourth Movement<br>Hanchipura Road, Saragur, Heggadadevankote taluk, Mysore District - 571 121. | - | Member |

2. The terms of reference of the Vision Group will be as follows :-

(i) To provide inputs to enable the State to finalise and implement the Vision 2020.

(ii) To provide guidance on the strategies, programmes, performance across different sectors based on an external perspective;

(iii) To monitor initiatives and actions taken up to achieve the vision.

By order and in the name of the Governor of Karnataka,

**USHA BAI**
Under Secretary to Government-3
Planning, Programme Monitoring
and Statistics Department

# ವಿಶೇಷ ಪತ್ರಿಕೆ

| ಭಾಗ - I | ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ | ನಂ. ೧೩೩೩ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆ 2003 ರ ಸೆಕ್ಷನ್ 5 ರ ಅನ್ವಯ ರಾಜ್ಯ ಮತ್ತು ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 121 ಸಿಜಿಎಂ 2005 ದಿನಾಂಕ: 09–07–2005.

2) ಕೇಂದ್ರ ಆಕುಕ ಸಚಿವಾಲಯದ ಪತ್ರ ಸಂಖ್ಯೆ: P–16015/4/2005– PH ದಿನಾಂಕ: 06–05–2008

3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂಖ್ಯೆ:ಜೆಡಿಎಂ/ಟೊಬ್ಯಾಕೊ/1/08–09 ದಿನಾಂಕ:26–05–08.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆ 2003 ರ ಅನ್ವಯ ಸಾರ್ವಜನಿಕ ಸ್ಥಳಗಳಲ್ಲಿ ತಂಬಾಕು ಉತ್ಪನ್ನಗಳನ್ನು ಬಳಕೆ ಮಾಡುವ ಕುರಿತು ನಿಯಂತ್ರಿಸಲು ರಾಜ್ಯ, ಜಿಲ್ಲೆ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಅಧಿಕೃತ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.

ಮೇಲೆ ಓದಲಾದ (2)ರ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಪತ್ರದಲ್ಲಿ ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆಯನ್ನು ಜಾರಿಗೊಳಿಸಲು ಉಸ್ತುವಾರಿ ಸಮಿತಿಗಳನ್ನು ರಚಿಸುವ ಬಗ್ಗೆ ಸಮಿತಿಗಳು ನಿರ್ವಹಿಸಬೇಕಿರುವ ಕರ್ತವ್ಯಗಳ ಬಗ್ಗೆ ತಿಳಿಸಿರುತ್ತಾರೆ.

ಮೇಲೆ ಓದಲಾದ (3) ರ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಏಕಕಡತದಲ್ಲಿ ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆಯ ಸೆಕ್ಷನ್ 5ರ ಉಲ್ಲಂಘನೆಯನ್ನು ತಡೆಯಲು ನೇಮಕ ಮಾಡಲಾದ ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕೃತ ಅಧಿಕಾರಿಗಳ ಕಾರ್ಯವೈಖರಿಯನ್ನು ಉಸ್ತುವಾರಿ (Monitor) ಮಾಡಲು ಸಮಿತಿಯನ್ನು ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ರಚಿಸುವಂತೆ ಕೇಂದ್ರ ಸರ್ಕಾರವು ದಿನಾಂಕ: 06–05–2008 ರ ಪತ್ರದಲ್ಲಿ ಕೋರಿದ್ದು, ಅದರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳು ಒಳಗೊಂಡಿಲ್ಲದಿರುವುದರಿಂದ ರಾಜ್ಯ ಮಟ್ಟದ ಸಮಿತಿಗೆ ಜಂಟಿ ನಿರ್ದೇಶಕರು (ವೈದ್ಯಕೀಯ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ಜಿಲ್ಲಾ ಮಟ್ಟದ ಸಮಿತಿಗೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ಸೇರಿಸಿ ಈ ಕೆಳಕಂಡಂತೆ ಉಸ್ತುವಾರಿ ಸಮಿತಿಗಳನ್ನು ರಚಿಸಲು ಪ್ರಸ್ತಾಪಿಸಿರುತ್ತಾರೆ.

**1) ರಾಜ್ಯ ಮಟ್ಟದ ಸಮಿತಿ**

| | | | |
|---|---|---|---|
| 1) | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | | ಅಧ್ಯಕ್ಷರು |
| 2) | ನೋಡಲ್ ಆಫೀಸರ್ / ಜಂಟಿ ನಿರ್ದೇಶಕರು (ವೈದ್ಯಕೀಯ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | – | ಸದಸ್ಯಕಾರ್ಯದರ್ಶಿ |
| 3) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ಪ್ರತಿನಿಧಿ | – | ಸದಸ್ಯರು |

| | | |
|---|---|---|
| 4) ರಾಜ್ಯ ಪೊಲೀಸ್ ಇಲಾಖೆಯ ಡೈರೆಕ್ಟರ್ ಜನರಲ್ ಇವರ ಪ್ರತಿನಿಧಿ | – | ಸದಸ್ಯರು |
| 5) ಆಹಾರ ಮತ್ತು ಔಷಧ ಇಲಾಖೆಯ ಪ್ರತಿನಿಧಿ | – | ಸದಸ್ಯರು |
| 6) ಆರೋಗ್ಯ/ತಂಬಾಕು ನಿಯಂತ್ರಣ ಕ್ಷೇತ್ರದಲ್ಲಿ ಪರಿಣಿತಿಯುಳ್ಳ ಸರ್ಕಾರೇತರ ಸಂಸ್ಥೆಯ ಪ್ರತಿನಿಧಿ (ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ನಾಮನಿರ್ದೇಶನಗೊಂಡ) | – | ಸದಸ್ಯರು |
| 7) ಅಕಾಡೆಮಿಷಿಯನ್/ಸೈಕಾಲಜಿಸ್ಟ್/ಸೋಷಿಯಾಲಜಿಸ್ಟ್ (ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ನಾಮನಿರ್ದೇಶನಗೊಂಡ ಪ್ರತಿನಿಧಿ) | – | ಸದಸ್ಯರು |

**ರಾಜ್ಯ ಮಟ್ಟದ ಉಸ್ತುವಾರಿ ಸಮಿತಿ ನಿರ್ವಹಿಸಬೇಕಿರುವ ಕಾರ್ಯಗಳು:**

1) ಜಿಲ್ಲಾ / ಸ್ಥಳೀಯ ಸಮಿತಿಗಳನ್ನು ರಚಿಸಲಾಗಿದೆಯೆ ಎಂಬ ಬಗ್ಗೆ ಗಮನಿಸುವುದು.
2) ಸದರಿ ಸಮಿತಿಗಳು ಕಾಲಕಾಲಕ್ಕೆ ಸಭೆಗಳನ್ನು ನಡೆಸುತ್ತಿರುವ ಬಗ್ಗೆ ಗಮನಿಸುವುದು.
3) ಪ್ರಾಧಿಕೃತ ಅಧಿಕಾರಿಗಳು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವರೆ ಎಂಬ ಬಗ್ಗೆ ಗಮನಿಸುವುದು.
4) ಅವರುಗಳು ಎಷ್ಟು ಪ್ರಕರಣಗಳನ್ನು ನಿರ್ವಹಿಸಿದ್ದಾರೆ ಮತ್ತು ಆ ಪೈಕಿ ಯಾವ ತೀರ್ಮಾನಕ್ಕೆ ಬರಲಾಗಿದೆ ಎಂಬುದನ್ನು ಗಮನಿಸುವುದು.
5) ಜಿಲ್ಲಾ / ಸ್ಥಳೀಯ ಸಮಿತಿಗಳಿಗೆ ಸಲಹೆ ಸೂಚನೆ ನೀಡುವುದು.
6) ಜಿಲ್ಲಾ ಮತ್ತು ಸ್ಥಳೀಯ ಸಮಿತಿ ಸಭೆಗಳು ಕಳುಹಿಸಿದ ವಿಷಯಗಳ ಬಗ್ಗೆ ತೀರ್ಮಾನಿಸುವುದು.
7) ಜಿಲ್ಲಾ ಮತ್ತು ಸ್ಥಳೀಯ ಸಮಿತಿಗಳ ಬಗ್ಗೆ ಮಾಹಿತಿಯನ್ನು ತಾಳೆನೋಡಿ ಅವುಗಳನ್ನು ಆಕುಕ ಸಚಿವಾಲಯ, ಭಾರತ ಸರ್ಕಾರ ಅಥವಾ ಕೇಂದ್ರ ಆಕುಕ ಸಚಿವಾಲಯ ಗೊತ್ತುಪಡಿಸಿಲಾದವರಿಗೆ ರವಾನಿಸುವುದು.
8) ಭಾರತ ಸರ್ಕಾರ ತಂಬಾಕು ನಿಯಂತ್ರಣ ಕಾಯ್ದೆ 2003 ರ ಸಕ್ಸನ್ 5 ರ ಉಲ್ಲಂಘನೆ ಕುರಿತು ಸಮಿತಿಯ ಗಮನಕ್ಕೆ ಬಂದವುಗಳಲ್ಲಿ ಕ್ರಮ ತೆಗೆದುಕೊಳ್ಳಲು ಶಿಫಾರಸ್ಸು ಮಾಡುವುದು.

**2) ಜಿಲ್ಲಾ ಮಟ್ಟದ ಸಮಿತಿ**

| | | |
|---|---|---|
| 1) ಜಿಲ್ಲಾ ಜಿಲ್ಲಾಧಿಕಾರಿ (ಅಥವಾ ಪೊಲೀಸ್ ಆಯುಕ್ತರು) | – | ಅಧ್ಯಕ್ಷರು |
| 2) ನೋಡಲ್ ಆಫೀಸರ್/ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ | – | ಸದಸ್ಯ ಕಾರ್ಯದರ್ಶಿ |
| 3) ಜಿಲ್ಲಾ ಪೊಲಿಸ್ ವರಿಷ್ಠಾಧಿಕಾರಿ | – | ಸದಸ್ಯರು |
| 4) ಜಿಲ್ಲಾ ಸಾರ್ವಜನಿಕ ಸಂಪರ್ಕಾಧಿಕಾರಿ | – | ಸದಸ್ಯರು |
| 5) ಔಷಧ ಮತ್ತು ಆಹಾರ ನಿರೀಕ್ಷಕರು | – | ಸದಸ್ಯರು |
| 6) ಆರೋಗ್ಯ/ತಂಬಾಕು ನಿಯಂತ್ರಣ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗಳಲ್ಲಿ ಪರಿಣಿತಿಯುಳ್ಳ ಪ್ರತಿನಿಧಿ | – | ಸದಸ್ಯರು |
| 7) ಜಿಲ್ಲೆಯ ಪ್ರಮುಖ ಕಾಲೇಜಿನ ಪ್ರಾಂಶುಪಾಲರು | – | ಸದಸ್ಯರು |
| 8) ಅಕಾಡೆಮಿಷಿಯನ್/ಸೈಕಾಲಜಿಸ್ಟ್/ಸೋಷಿಯಾಲಜಿಸ್ಟ್ (ಜಿಲ್ಲಾಧಿಕಾರಿ ಇವರಿಂದ ನಾಮ ನಿರ್ದೇಶಿಸಲ್ಪಡುವ ಒಬ್ಬ ಪ್ರತಿನಿಧಿ) | – | ಸದಸ್ಯರು |

**ಸಮಿತಿಯ ಕಾರ್ಯವ್ಯಾಪ್ತಿ**

1) ಸಾರ್ವಜನಿಕರು ಪ್ರತ್ಯಕ್ಷವಾಗಿ, ಪರೋಕ್ಷವಾಗಿ / ಜಾಹಿರಾತು ಮೂಲಕವಾಗಲಿ ಅಥವಾ ಮೀಡಿಯಾ ಮೂಲಕವಾಗಲಿ ತಂಬಾಕು ಮತ್ತು ತಂಬಾಕು ಸಂಬಂಧಿತ ಉತ್ಪಾದನೆಗಳ ಬಗ್ಗೆ (ಮುದ್ರಿತ ಅಥವಾ ಎಲೆಕ್ಟ್ರಾನಿಕ್) ದೂರು ದಾಖಲಿಸಲು ಒಂದು ವೇದಿಕೆಯನ್ನು ನಿರ್ಮಾಣ ಮಾಡುವುದು ಮತ್ತು ನಿಯಮಾನುಸಾರವಾಗಿ ಅಗತ್ಯ ಕ್ರಮ ಕೈಗೊಳ್ಳುವುದು.
2) ಭಾರತ ತಂಬಾಕು ನಿಯಂತ್ರಣ ಕಾಯ್ದೆ, 2003 ರ ಸೆಕ್ಸನ್–5 ನ್ನು ಜಾರಿಗೊಳಿಸಿದ ಬಗ್ಗೆ ಪುನರ್ ವಿಮರ್ಶಿಸುವುದು.

3) ಯಾವುದೇ ಕಾರ್ಯಕ್ರಮವು ಸಾರ್ವಜನಿಕ ಆದೇಶಕ್ಕೆ ವ್ಯತಿರಿಕ್ತವಾಗಿದ್ದಲ್ಲಿ ಅದನ್ನು ಕೂಡಲೇ ಕೇಂದ್ರ/ರಾಜ್ಯ ಸರ್ಕಾರದ ಗಮನಕ್ಕೆ ತರುವುದು.

4) ಪೋಲೀಸ್ ಕಮಿಷನರ್ ನೇಮಕವಾಗಿರುವ ಎಲ್ಲಾ ನಗರಗಳಲ್ಲಿ ಅವರೇ ಸಮಿತಿ ಅಧ್ಯಕ್ಷರಾಗಿರತಕ್ಕದ್ದು. ಹಾಗೂ ಉಳಿದ ಎಲ್ಲಾ ಸದಸ್ಯರುಗಳನ್ನು ಮೇಲೆ ತಿಳಿಸಲಾಗಿರುವಂತೆ ಅವರೇ ನಾಮಕರಣ ಮಾಡತಕ್ಕದ್ದು.

5) ನಾಮಕರಣಗೊಂಡ ಸದಸ್ಯರ ಅವಧಿಯು ಎರಡು ವರ್ಷಗಳು. ಪುನ: ನಾಮಕರಣಕ್ಕೆ ಅವಕಾಶವಿರುವುದಿಲ್ಲ. ತೆರವಾದ ಜಾಗಕ್ಕೆ ಹೊಸ ಸದಸ್ಯರನ್ನು ನಾಮಕರಣ ಮಾಡತಕ್ಕದ್ದು.

6) ರಾಜ್ಯ / ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿ ದೂರುಗಳ ಬಗ್ಗೆ ಪುನರ್ ವಿಮರ್ಷಿಸಿ/ಚರ್ಚಿಸಿ ಅಂತಿಮ ನಿರ್ಣಯವನ್ನು ಸಭೆಯಲ್ಲಿ ಹಾಜರಿದ್ದ ಸದಸ್ಯರ ಬಹುಮತದ ಅಭಿಪ್ರಾಯದ ಪ್ರಕಾರ ತೆಗೆದುಕೊಳ್ಳುವುದು.

7) ಅಂತರರಾಜ್ಯ ಉಲ್ಲಂಘನೆಗೆ ಸಂಬಂಧಪಟ್ಟಂತೆ ರಾಜ್ಯ ಮಟ್ಟದ ಸಮಿತಿಯು ನಿಯಮಾನುಸಾರ ಕ್ರಮ ಕೈಗೊಳ್ಳುವುದು. ಅಂತಹ ಪ್ರಕರಣಗಳನ್ನು ನೋಡಲ್ ಅಧಿಕಾರಿ ಅಂದರೆ, ಡೈರೆಕ್ಟರ್ ಪಬ್ಲಿಕ್ ಹೆಲ್ತ್, ಮಿನಿಸ್ಟ್ರಿ ಆಫ್ ಹೆಲ್ತ್ ಅಂಡ್ ಫ್ಯಾಮಿಲಿ ವೆಲ್‌ಫೇರ್, ಭಾರತ ಸರ್ಕಾರರವರಿಗೆ ಕಳುಹಿಸುವುದು. ಅವರು ಸಂಬಂಧಪಟ್ಟ ರಾಜ್ಯಗಳಿಗೆ ನಿರ್ವಹಣೆ ಮಾಡುವ ಅಧಿಕಾರಿಗಳ ಜೊತೆ ಕ್ರಮವಹಿಸುವರು. ಈ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಚಾಲನಾ ಸಮಿತಿಗೂ ಸಹ ಮಾಹಿತಿ ನೀಡುವುದು.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 452 ಸಿಜಿಎಂ 2007, ಬೆಂಗಳೂರು ದಿನಾಂಕ:27-09-2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಭಾರತೀಯ ತಂಬಾಕು ನಿಯಂತ್ರಣ ಕಾಯ್ದೆ 2003 ರ ಸೆಕ್ಷನ್ 5 ರ ಉಲ್ಲಂಘನೆಯನ್ನು ತಡೆಯಲು ಈಗಾಗಲೇ ನೇಮಕ ಮಾಡಲಾದ ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕೃತ ಅಧಿಕಾರಿಗಳ ಕಾರ್ಯವೈಖರಿಯನ್ನು ಉಸ್ತುವಾರಿ ಮಾಡಲು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ರಾಜ್ಯ ಮತ್ತು ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿಗಳನ್ನು (Monitoring committies) ರಚಿಸಲು ಸರ್ಕಾರ ಆದೇಶಿಸಿದೆ.

**2) ರಾಜ್ಯ ಮಟ್ಟದ ಸಮಿತಿ**

| | | | |
|---|---|---|---|
| 1) | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | | ಅಧ್ಯಕ್ಷರು |
| 2) | ನೋಡಲ್ ಆಫೀಸರ್ / ಜಂಟಿ ನಿರ್ದೇಶಕರು (ವೈದ್ಯಕೀಯ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | – | ಸದಸ್ಯಕಾರ್ಯದರ್ಶಿ |
| 3) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಪ್ರತಿನಿಧಿ | – | ಸದಸ್ಯರು |
| 4) | ರಾಜ್ಯ ಪೊಲೀಸ್ ಇಲಾಖೆಯ ಡೈರೆಕ್ಟರ್ ಜನರಲ್ ಇವರ ಪ್ರತಿನಿಧಿ | – | ಸದಸ್ಯರು |
| 5) | ಆಹಾರ ಮತ್ತು ಔಷಧ ಇಲಾಖೆಯ ಪ್ರತಿನಿಧಿ | – | ಸದಸ್ಯರು |
| 6) | ಆರೋಗ್ಯ/ತಂಬಾಕು ನಿಯಂತ್ರಣ ಕ್ಷೇತ್ರದಲ್ಲಿ ಪರಿಣಿತಿಯುಳ್ಳ ಸರ್ಕಾರೇತರ ಸಂಸ್ಥೆಯ ಪ್ರತಿನಿಧಿ (ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ನಾಮ ನಿರ್ದೇಶನಗೊಂಡ) | – | ಸದಸ್ಯರು |
| 7) | ಅಕಾಡೆಮಿಷಿಯನ್/ಸೈಕಾಲಜಿಸ್ಟ್/ಸೋಷಿಯಾಲಜಿಸ್ಟ್ (ಕಾರ್ಯದರ್ಶಿ, ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ನಾಮನಿರ್ದೇಶನಗೊಂಡ ಪ್ರತಿನಿಧಿ) | – | ಸದಸ್ಯರು |

**ರಾಜ್ಯ ಮಟ್ಟದ ಉಸ್ತುವಾರಿ ಸಮಿತಿ ನಿರ್ವಹಿಸಬೇಕಿರುವ ಕಾರ್ಯಗಳು:**

1) ಜಿಲ್ಲಾ / ಸ್ಥಳೀಯ ಸಮಿತಿಗಳನ್ನು ರಚಿಸಲಾಗಿದೆಯೆ ಎಂಬ ಬಗ್ಗೆ ಗಮನಿಸುವುದು.

2) ಸದರಿ ಸಮಿತಿಗಳು ಕಾಲಕಾಲಕ್ಕೆ ಸಭೆಗಳನ್ನು ನಡೆಸುತ್ತಿರುವ ಬಗ್ಗೆ ಗಮನಿಸುವುದು.

3) ಪ್ರಾಧಿಕೃತ ಅಧಿಕಾರಿಗಳು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವರೆ ಎಂಬ ಬಗ್ಗೆ ಗಮನಿಸುವುದು.

4) ಅವರುಗಳು ಎಷ್ಟು ಪ್ರಕರಣಗಳನ್ನು ನಿರ್ವಹಿಸಿದ್ದಾರೆ ಮತ್ತು ಆ ಪೈಕಿ ಯಾವ ತೀರ್ಮಾನಕ್ಕೆ ಬರಲಾಗಿದೆ ಎಂಬುದನ್ನು ಗಮನಿಸುವುದು.

5) ಜಿಲ್ಲಾ / ಸ್ಥಳೀಯ ಸಮಿತಿಗಳಿಗೆ ಸಲಹೆ ಸೂಚನೆ ನೀಡುವುದು.

6) ಜಿಲ್ಲಾ ಮತ್ತು ಸ್ಥಳೀಯ ಸಮಿತಿ ಸಭೆಗಳು ಕಳುಹಿಸಿದ ವಿಷಯಗಳ ಬಗ್ಗೆ ತೀರ್ಮಾನಿಸುವುದು.

7) ಜಿಲ್ಲಾ ಮತ್ತು ಸ್ಥಳೀಯ ಸಮಿತಿಗಳ ಬಗ್ಗೆ ಮಾಹಿತಿಯನ್ನು ತಾಳೆನೋಡಿ ಅವುಗಳನ್ನು ಆಕುಕ ಸಚಿವಾಲಯ, ಭಾರತ ಸರ್ಕಾರ ಅಥವಾ ಕೇಂದ್ರ ಆಕುಕ ಸಚಿವಾಲಯ ಗೊತ್ತುಪಡಿಸಿಲಾದವರಿಗೆ ರವಾನಿಸುವುದು.

8) ಭಾರತ ಸರ್ಕಾರ ತಂಬಾಕು ನಿಯಂತ್ರಣ ಕಾಯ್ದೆ 2003 ರ ಸಕ್ಸನ್ 5 ರ ಉಲ್ಲಂಘನೆ ಕುರಿತು ಸಮಿತಿಯ ಗಮನಕ್ಕೆ ಬಂದವುಗಳಲ್ಲಿ ಕ್ರಮ ತೆಗೆದುಕೊಳ್ಳಲು ಶಿಫಾರಸ್ಸು ಮಾಡುವುದು.

**2) ಜಿಲ್ಲಾ ಮಟ್ಟದ ಸಮಿತಿ**

| | | | |
|---|---|---|---|
| 1) | ಜಿಲ್ಲಾ ಜಿಲ್ಲಾಧಿಕಾರಿ (ಅಥವಾ ಪೋಲೀಸ್ ಆಯುಕ್ತರು) | – | ಅಧ್ಯಕ್ಷರು |
| 2) | ನೋಡಲ್ ಆಫೀಸರ್/ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ | – | ಸದಸ್ಯ ಕಾರ್ಯದರ್ಶಿ |
| 3) | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ | – | ಸದಸ್ಯರು |
| 4) | ಜಿಲ್ಲಾ ಸಾರ್ವಜನಿಕ ಸಂಪರ್ಕಾಧಿಕಾರಿ | – | ಸದಸ್ಯರು |
| 5) | ಔಷಧ ಮತ್ತು ಆಹಾರ ನಿರೀಕ್ಷಕರು | – | ಸದಸ್ಯರು |
| 6) | ಆರೋಗ್ಯ / ತಂಬಾಕು ನಿಯಂತ್ರಣ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಗಳಲ್ಲಿ ಪರಿಣಿತಿಯುಳ್ಳ ಪ್ರತಿನಿಧಿ | – | ಸದಸ್ಯರು |
| 7) | ಜಿಲ್ಲೆಯ ಪ್ರಮುಖ ಕಾಲೇಜಿನ ಪ್ರಾಂಶುಪಾಲರು | – | ಸದಸ್ಯರು |
| 8) | ಜಿಲ್ಲಾ ಅಕಾಡೆಮಿಷಿಯನ್/ಸೈಕಾಲಜಿಸ್ಟ್/ಸೋಷಿಯಾಲಜಿಸ್ಟ್ (ಜಿಲ್ಲಾಧಿಕಾರಿ ಇವರಿಂದ ನಾಮ ನಿರ್ದೇಶಿಸಲ್ಪಡುವ ಒಬ್ಬ ಪ್ರತಿನಿಧಿ) | – | ಸದಸ್ಯರು |

**ಸಮಿತಿಯ ಕಾರ್ಯವ್ಯಾಪ್ತಿ**

1) ಸಾರ್ವಜನಿಕರು ಪತ್ಯಕ್ಷವಾಗಿ, ಪರೋಕ್ಷವಾಗಿ / ಜಾಹಿರಾತು ಮೂಲಕವಾಗಲಿ ಅಥವಾ ಮೀಡಿಯಾ ಮೂಲಕವಾಗಲಿ ತಂಬಾಕು ಮತ್ತು ತಂಬಾಕು ಸಂಬಂಧಿತ ಉತ್ಪಾದನೆಗಳ ಬಗ್ಗೆ (ಮುದಿತ ಅಥವಾ ಎಲೆಕ್ಟ್ರಾನಿಕ್) ದೂರು ದಾಖಲಿಸಲು ಒಂದು ವೇದಿಕೆಯನ್ನು ನಿರ್ಮಾಣ ಮಾಡುವುದು ಮತ್ತು ನಿಯಮಾನುಸಾರವಾಗಿ ಅಗತ್ಯ ಕ್ರಮ ಕೈಗೊಳ್ಳುವುದು.

2) ಭಾರತ ತಂಬಾಕು ನಿಯಂತಣ ಕಾಯ್ದೆ, 2003 ರ ಸೆಕ್ಸನ್–5 ನ್ನು ಜಾರಿಗೊಳಿಸಿದ ಬಗ್ಗೆ ಪುನರ್ ವಿಮರ್ಶಿಸುವುದು.

3) ಯಾವುದೇ ಕಾರ್ಯಕ್ರಮವು ಸಾರ್ವಜನಿಕ ಆದೇಶಕ್ಕೆ ವ್ಯತಿರಿಕ್ತವಾಗಿದ್ದಲ್ಲಿ ಅದನ್ನು ಕೂಡಲೇ ಕೇಂದ್ರ / ರಾಜ್ಯ ಸರ್ಕಾರದ ಗಮನಕ್ಕೆ ತರುವುದು.

4) ಪೋಲೀಸ್ ಕಮಿಷನರ್ ನೇಮಕವಾಗಿರುವ ಎಲ್ಲಾ ನಗರಗಳಲ್ಲಿ ಅವರೇ ಸಮಿತಿ ಅಧ್ಯಕ್ಷರಾಗಿರತಕ್ಕದ್ದು. ಹಾಗೂ ಉಳಿದ ಎಲ್ಲಾ ಸದಸ್ಯರುಗಳನ್ನು ಮೇಲೆ ತಿಳಿಸಲಾಗಿರುವಂತೆ ಅವರೇ ನಾಮಕರಣ ಮಾಡತಕ್ಕದ್ದು.

5) ನಾಮಕರಣಗೊಂಡ ಸದಸ್ಯರ ಅವಧಿಯು ಎರಡು ವರ್ಷಗಳು. ಪುನ: ನಾಮಕರಣಕ್ಕೆ ಅವಕಾಶವಿರುವುದಿಲ್ಲ. ತೆರವಾದ ಜಾಗಕ್ಕೆ ಹೊಸ ಸದಸ್ಯರನ್ನು ನಾಮಕರಣ ಮಾಡತಕ್ಕದ್ದು/

6) ರಾಜ್ಯ / ಜಿಲ್ಲಾ ಮಟ್ಟದ ಉಸ್ತುವಾರಿ ಸಮಿತಿ ದೂರುಗಳ ಬಗ್ಗೆ ಪುನರ್ ವಿಮರ್ಷಿಸಿ / ಚರ್ಚಿಸಿ ಅಂತಿಮ ನಿರ್ಣಯವನ್ನು ಸಭೆಯಲ್ಲಿ ಹಾಜರಿದ್ದ ಸದಸ್ಯರ ಬಹುಮತದ ಅಭಿಪ್ರಾಯದ ಪ್ರಕಾರ ತೆಗೆದುಕೊಳ್ಳುವುದು.

7) ಅಂತರರಾಜ್ಯ ಉಲ್ಲಂಘನೆಗೆ ಸಂಬಂಧಪಟ್ಟಂತೆ ರಾಜ್ಯ ಮಟ್ಟದ ಸಮಿತಿಯು ನಿಯಮಾನುಸಾರ ಕ್ರಮ ಕೈಗೊಳ್ಳುವುದು. ಅಂತಹ ಪ್ರಕರಣಗಳನ್ನು ನೋಡಲ್ ಅಧಿಕಾರಿ ಅಂದರೆ, ಡೈರೆಕ್ಟರ್ ಪಬ್ಲಿಕ್ ಹೆಲ್ತ್, ಮಿನಿಸ್ಟ್ರಿ ಆಫ್ ಹೆಲ್ತ್ ಅಂಡ್ ಫ್ಯಾಮಿಲಿ ವೆಲ್‌ಫೇರ್, ಭಾರತ ಸರ್ಕಾರರವರಿಗೆ ಕಳುಹಿಸುವುದು. ಅವರು ಸಂಬಂಧಪಟ್ಟ ರಾಜ್ಯಗಳಿಗೆ ನಿರ್ವಹಣೆ ಮಾಡುವ ಅಧಿಕಾರಿಗಳ ಜೊತೆ ಕ್ರಮವಹಿಸುವರು. ಈ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯದ ಚಾಲನಾ ಸಮಿತಿಗೂ ಸಹ ಮಾಹಿತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ಸರೋಜಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

ಭಾಗ - I ‖ ಬೆಂಗಳೂರು, ಬುಧವಾರ, ಡಿಸೆಂಬರ್ ೧೭, ೨೦೦೮ (ಮಾರ್ಗಶಿರ ೨೬, ಶಕ ವರ್ಷ ೧೯೩೦ ‖ ನಂ. ೧೩೩೪

## ಕರ್ನಾಟಕ ಸರ್ಕಾರದ ನಡವಳಿಗಳು

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಆರತಿ ಎಂ. ಸ್ತ್ರೀರೋಗ ತಜ್ಞರು, ಸರ್ಕಾರಿ ಹಿರಿಗೆ ಆಸ್ಪತ್ರೆ, ಉಡುಪಿ ಇವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ (1) 46/ ಉಡುಪಿ/ 04-05 ದಿನಾಂಕ: 02/02/2005.
2) ಆಯುಕ್ತರು, ಆಕುಕ.ಸೇವೆಗಳು, ಬೆಂಗಳೂರು ಇವರ ವಿಚಾರಣಾ ಆದೇಶ ಸಂಖ್ಯೆ: ಡಿಪಿಜಿ (1) 46/ ಉಡುಪಿ/ 04-05 ದಿನಾಂಕ: 02/04/2005.
3) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ 01/2005-06 ದಿನಾಂಕ: 05/10/2005.
4) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ (1) 46/ ಉಡುಪಿ/ 04-05 ದಿನಾಂಕ: 18/11/2005.
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ (1) 46/ ಉಡುಪಿ/ 04-05 ದಿನಾಂಕ: 19/05/2008.

**ಪ್ರಸ್ತಾವನೆ :**

ಡಾ: ಆರತಿ ಎಂ., ಸ್ತ್ರೀರೋಗ ತಜ್ಞರು, ಸರ್ಕಾರಿ ಹಿರಿಗೆ ಆಸ್ಪತ್ರೆ, ಉಡುಪಿ ಇವರು ದಿನಾಂಕ: 10/07/2004 ರಿಂದ ಈವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿದ್ದರು.

ಆರೋಪಿತ ವೈದ್ಯಾಧಿಕಾರಿಯು ಸದರಿ ಕಾರಣ ಕೇಳಿರುವ ನೋಟೀಸನ್ನು ತಿರಸ್ಕರಿಸಿರುವ ಕಾರಣ ಅವರು ಹೇಳುವುದು ಏನೂ ಇಲ್ಲವೆಂದು ಭಾವಿಸಿ, ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರು ಈ ಪ್ರಕರಣವನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸಿ ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಮೇಲೆ (3) ರಲ್ಲಿ ಓದಲಾದ ವಿಚಾರಣಾ ವರದಿಯಲ್ಲಿ ಆಪಾದಿತ ವೈದ್ಯರ ವಿರುದ್ಧ ಅನಧಿಕೃತ ಗೈರುಹಾಜರಿಯ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂದು ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದಾರೆ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (4) ರಲ್ಲಿ ಓದಲಾದ ತಿಳುವಳಿಕೆ ಪತ್ರವನ್ನು ಸದರಿ ವೈದ್ಯರಿಗೆ ಜಾರಿ ಮಾಡಿದ್ದು, ಅದಕ್ಕೂ ಡಾ:ಎಂ.ಆರತಿ ಇವರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಡಾ: ಎಂ.ಆರತಿ ಇವರ ಅನಧಿಕೃತ ಗೈರುಹಾಜರಿ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ-8 ರಡಿಯಲ್ಲಿ ಕಠಿಣ ದಂಡನೆಯನ್ನು ವಿಧಿಸುವಂತೆ ಕೋರಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಆರತಿ ಎಂ. ಇವರು ದಿನಾಂಕ: 10/07/2004 ರಿಂದ ಈವರೆವಿಗೆ ಅನಧಿಕೃತವಾಗಿ ಸರ್ಕಾರಿ ಸೇವೆಗೆ ಗೈರುಹಾಜರಾಗಿರುವ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ-8(VIII) ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 242 ಎಂಎಸ್‌ಎ 2008, ಬೆಂಗಳೂರು, ದಿನಾಂಕ: 20/10/2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಆರತಿ ಎಂ., ಸ್ತ್ರೀರೋಗ ತಜ್ಞರು, ಸರ್ಕಾರಿ ಹಿರಿಗೆ ಆಸ್ಪತ್ರೆ, ಉಡುಪಿ ಇವರು ದಿನಾಂಕ: 10/07/2004 ರಿಂದ ಈವರೆವಿಗೆ ಅನಧಿಕೃತವಾಗಿ ಸರ್ಕಾರಿ ಸೇವೆಗೆ ಗೈರುಹಾಜರಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ-8(VIII) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು.**